# 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಭಾಷಿಕ ವಿವೇಚನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ

ಸಂಪ್ರಬಂಧ)

ಎಂ.ಫಿಲ್ ವಿದ್ಯಾರ್ಥಿ

ಹನುಮಂತ ನರಸಪ್ಪ.

ಮಾರ್ಗದರ್ಶಕರು

ಡಾ. ಸಾಂಬಮೂರ್ತಿ

ಪ್ರವಾಚಕರು



ಭಾಷಾನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೦೯-೨೦೧೦

# 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಭಾಷಿಕ ವಿವೇಚನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ನೇ ಸಾಲಿನ ಎಂಫಿಲ್ ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ಎಂ.ಫಿಲ್ ವಿದ್ಯಾರ್ಥಿ
ಹನುಮಂತ ನರಸಪ್ಪ.

ನೋಂದಣಿ ಸಂಖ್ಯೆ
KUKB/00410

ಮಾರ್ಗದರ್ಶಕರು
ಡಾ. ಸಾಂಬಮೂರ್ತಿ
ಪ್ರವಾಚಕರು



ಭಾಷಾನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೦೯-೨೦೧೦



# ದೃಢೀಕರಣ ಪತ್ರ

ಶ್ರೀ ಹನುಮಂತ ನರಸಪ್ಪ. ಬರೆದು ಸಾದರ ಪಡಿಸಿದ ''ಹೊಲಗೇರಿಯ ರಾಜಕುಮಾರ' ಕಾದಂಬರಿಯ ಭಾಷಿಕ ವಿವೇಚನೆ ಎಂಬ ಸಂಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ. ಶ್ರೀ ಹನುಮಂತ ನರಸಪ್ಪ ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗದಲ್ಲಿ ಈ ಸಂಶೋಧನೆಯನ್ನು ಕೈಗೊಂಡಿದ್ದಾರೆ.

ಈ ಸಂಪ್ರಬಂಧವು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು
**ಡಾ. ಸಾಂಬಮೂರ್ತಿ**
ಪ್ರವಾಚಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 6.9.2010

# ಪ್ರಮಾಣ ಪತ್ರ

'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಭಾಷಿಕ ವಿವೇಚನೆ ಎಂಬ ನಿಬಂಧವನ್ನು ಡಾ.ಸಾಂಬಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಭಾಷಾನಿಕಾಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 7/9/2010

ಸಂಶೋಧಕರು
**ಹನುಮಂತ ನರಸಪ್ಪ**
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಭಾಷಿಕ ವಿವೇಚನೆ ಎಂಬ ವಿಷಯದ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಅನುಮತಿ ನೀಡಿರುವಂತಹ ಶ್ರೀ ಮಾನ್ಯ ಕುಲಪತಿಗಳಾದ ಡಾ. ಎ.ಮುರಿಗೆಪ್ಪ ಅವರಿಗೆ ಹಾಗೂ ಮಾನ್ಯ ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಮಾನ್ಯ ಡಾ.ವೀರೇಶ ಬಡಿಗೇರ ಅವರಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಕನ್ನಡ ಭಾಷಾಧ್ಯಯನ ವಿಭಾಗದ ನನ್ನ ಆತ್ಮೀಯ ಗುರುಗಳಾದ ಅಧ್ಯಯನಕ್ಕೆ ತುಂಬ ಸಹಕರಿಸಿದ ವಿಭಾಗದ ಮುಖ್ಯಸ್ಥರೂ ಆದ ಡಾ.ಪಾಂಡುರಂಗಬಾಬು ಡಿ. ಅವರಿಗೆ ಅಧ್ಯಯನದಲ್ಲಿ ತುಂಬಾ ಸಹನೆಯಿಂದ ಸಂಪ್ರಬಂಧಕ್ಕೆ ಸಂಬಂಧಿಸಿ ತಿದ್ದಿ ತೀಡಿದ ನೆಚ್ಚಿನ ಮಾರ್ಗದರ್ಶಕರೂ ಆದ ಡಾ. ಸಾಂಬಮೂರ್ತಿ ಅವರಿಗೆ, ಯಾವತ್ತೂ ಸಲಹೆ ಸೂಚನೆ ನೀಡುತ್ತಿರುವ ಡಾ.ಮಹಾದೇವಯ್ಯ ಪಿ. ಅವರಿಗೆ ಸಂಶೋಧನ ಪ್ರಗತಿಕಾರ್ಯದ ಬಗ್ಗೆ ವಿಚಾರಿಸುತ್ತಿರುವ ಡಾ.ಅಶೋಕ ಕುಮಾರ ಅವರಿಗೆ, ಸಂಪ್ರಬಂಧದ ಸಂಪೂರ್ಣ ಡಿ.ಟಿ.ಪಿ. ಮಾಡಿಕೊಟ್ಟ ವಿಭಾಗದ ಸಹಾಯಕರು ಆಗಿರುವ ಹೆಚ್. ಶರಣಬಸಪ್ಪ ಅವರಿಗೆ ಮತ್ತು ಅಷ್ಟೇ ಆತ್ಮೀಯನಾಗಿ ನಡೆದುಕೊಂಡ ಮಾರೆಪ್ಪ ಅವರಿಗೂ ನನ್ನ ತುಂಬ ಹೃದಯದ ಕೃತಜ್ಞತೆಗಳು.

ಪ್ರಾಮುಖ್ಯವಾಗಿ ನನ್ನನ್ನು ದಂಡಿಸಿ, ನೋಯಿಸಿ ಮತ್ತು ಮನ್ನಿಸಿ ತನ್ನ ಅಮೃತ ಹಸ್ತದಿಂದ ವಿದ್ಯಾಭ್ಯಾಸಕ್ಕೆ ಕಳುಹಿಸಿ ಪುಣ್ಯಕಟ್ಟಿಕೊಂಡಿರುವ ಇಂದಿಗೂ ನನಗೆ ಆಧಾರಸ್ತಂಭವಾಗಿರುವ ನನ್ನ ಪರಮ ಪೂಜ್ಯನೀಯ ತಾಯಿಯಾದ ಪ್ರೇಮಲಮ್ಮ ಗಂಡ. ದಿ. ನರಸಪ್ಪ ಗೊರವರು ಅವರಿಗೆ ನಾನು ಎಷ್ಟು ಆರಾಧಿಸಿದರೂ ಅವರ ಪ್ರೀತಿಗೆ ಸಮನಾಗಲ್ಲ ಆದರೂ ತಡೆಯಲಾಗದೆ ಮಿಡಿಯುವ ಮಮತೆಯಿಂದ ಸಾಷ್ಟಾಂಗ ನಮನ ಹೇಳಿ, ಎಂದಿಗೂ ಆಭಾರಿಯಾಗಿರುತ್ತೇನೆ. ಹಾಗೆಯೇ ಕುಟುಂಬದ ಸದಸ್ಯರಾದ, ಬಂಧುಗಳಾದ ಅಜ್ಜ ವನಿಕೇರಪ್ಪ ಗೊರವರು, ಕುಟುಂಬದ ಸದಸ್ಯರಾದ, ಗೋಕರಮ್ಮ, ತಾಯಮ್ಮ, ಇನ್ನು ಮರಿಯಮ್ಮ, ರಾಣಿ, ಮಂಜುಳಾ, ಶಾಂತಮ್ಮ, ಮುತ್ತಮ್ಮ, ಕಾಳಮ್ಮ, ಶಶಿಕಲ, ಮರಿಯ, ಲಕ್ಷ್ಮಿ, ಭಾಗ್ಯಮ್ಮ ಹುಚ್ಚಪ್ಪ, ಮುಕ್ರಪ್ಪ, ಮಲ್ಲಯ, ತಿಪ್ಪಯ್ಯ, ರಾಜಪ್ಪ, ನರಸರಪ್ಪ, ಮುತ್ತಣ್ಣ, ಗುಂಡಮ್ಮ, ಯಶೋಧಾ, ದೇವಿ, ಮಾರುತಿ, ಸುವರ್ಣ, ಅಬ್ರಾಹ್ಮ, ಅವಿನಾಶ, ವೀರೇಶ, ನಯನ, ಪಾಲರಾಜ, ಉಲ್ಲಾಸ, ಪೂರ್ಣಿಮಾ, ಯಲ್ಲಪ್ಪ, ಅರುಣ, ಅಕ್ಷಿತ ಕಿರಣ ಎಲ್ಲರಿಗೂ ನನ್ನ ಅಭಿನಂದೆಗಳು.

ಪಿತೃಸ್ಥಾನದಲ್ಲಿರುವ ಶ್ರೀ ಮಾನ್ಯ ಅಧ್ಯಕ್ಷರಾದ ಚಂದ್ರಶೇಖರ ಕುರ್ಡಿ ತಾಲೂಕ ಪಂಚಾಯತ ಮಾನವಿ ಅವರಿಗೆ ಹಾಗೂ ಹಿರಿಯರು ಮತ್ತು ಗೆಳೆಯರಾದ ಸೀಮೊನ, ಪ್ರಭಾಕರ್, ಶೀಲಕುಮಾರ, ವಿಜಯ, ವಿಷ್ಣವಿ, ಶೇಖರಾಚಾರಿ, ಆಜಪ್ಪ ಬಾಬು, ಓವನ್, ಮಹಾದೇವಪ್ಪ ಮೌನೇಶ, ಮಹಿಬೂಬ ವಲಿ, ಚಂದ್ರು, ಯಲ್ಲಪ್ಪ, ಮಹಾಲಿಂಗ, ಹುಸೇನಿ, ರೇವಣಪ್ಪ, ಕೀರ್ತಿವರ್ಮ, ರಾಜಪ್ಪ ಹೊನ್ನೂರಸ್ವಾಮಿ ಕ್ರಿಷ್ಣಪ್ಪ, ಸಿದ್ರಾಮ, ಮಹಾಂತೇಶ, ಕುಮಾರ,ರಾಜೇಂದ್ರ, ಪ್ರಸನ್ನ ಕುಮಾರ, ಬಸರವರಾಜ, ಅಲಂಕಾರ ಅಂಜಿನಯ್ಯ, ವೀರೇಶ, ವೆಂಕಟೇಶ, ನಾಗೇಶ, ಸಂತೋಷಮ್ಮ, ಮಂಜುಳಾ, ಶಾಂತಬಾಯಿ, ನಿರ್ಮಲ ಗೀತಾ, ದೀಪಾ, ಪವನ್ ಎಲ್ಲರಿಗೂ ನನ್ನ ಮುಗಿಯದ ಮನಪೂರ್ವಕ ಕೃತಜ್ಞತೆಗಳು.

ವಿಶ್ವವಿದ್ಯಾಲಯದ ಅಕ್ಷರ ಗ್ರಂಥಾಲಯ, ಸಿರಿಗನ್ನಡ ಗ್ರಂಥಾಲಯ ವಿಭಾಗದ ಗ್ರಂಥಾಲಯ, ದರ್ಪಣ ಗಣಕಯಂತ್ರ ಕೇಂದ್ರ ಹಾಗೂ ಎಸ್ಸಿ, ಎಸ್ಟಿ ಸೆಲ್ ಗ್ರಂಥಾಲಯಗಳ ಮುಖ್ಯಸ್ಥರು ಮತ್ತು ಪ್ರತ್ಯಕ್ಷ ಪರೋಕ್ಷವಾಗಿ ಸಹಕರಿಸಿದ ವಸತಿ ನಿಲಯ (ಅನನ್ಯ)ದ ಸಿಬ್ಬಂದಿಗಳಿಗೂ ನನ್ನ ಅಭಿನಂದೆಗಳು.

ಇಂತಿ ನಿಮ್ಮ ವಿಶ್ವಾಸಿ

**ಹನುಮಂತ ಎನ್.ಜಿ.ಕೆ.**

ಪರಿವಿಡಿ

# ಅಧ್ಯಾಯ ೧

## ಉದ್ದೇಶ, ಸ್ವರೂಪ, ವಿಧಾನ

ಭಾಷೆ ನಿತ್ಯ ಪರಿವರ್ತನಾಶೀಲವಾಗಿರುತ್ತದೆ. ನಿಂತ ನೀರನ್ನು ಹರಿವ ನೀರು ಕೊಂಡೊಯ್ಯುವಂತೆ ಆಯಾ ಭಾಷೆಗಳೂ ಕಾಲದಿಂದ ಕಾಲಕ್ಕೆ ಹೊಸತನ್ನು ಕಂಡುಕೊಂಡು ಸಾಮಾಜಿಕ ಚಿತ್ರಣವನ್ನು, ಸಂಸ್ಕೃತಿಯ ಸ್ಥಿತಿಯನ್ನು, ಮಾನವ ಜೀವನವನ್ನು ಪ್ರತಿಬಿಂಬಿಸುತ್ತವೆ. ಇದಕ್ಕೆ ಕನ್ನಡ ಭಾಷೆಯೂ ಹೊರತಲ್ಲ. ಹಳಗನ್ನಡದಿಂದ ಹೊಸಗನ್ನಡವರೆಗೆ ಹಲವು ರೀತಿಯಲ್ಲಿ ಬೆಳವಣಿಗೆಯನ್ನು ಕಂಡಿದೆ. ಹೊಸಗನ್ನಡ ಭಾಷೆ ಪ್ರಮುಖವಾಗಿ ನಾಲ್ಕು ಪ್ರಕಾರಗಳಲ್ಲಿ ವೈವಿಧ್ಯಮಯವಾಗಿ ಬೆಳೆದುಬಂದಿದೆ. ಕಾವ್ಯ, ಕಥೆ, ಕಾದಂಬರಿ ಮತ್ತು ನಾಟಕ ಹೀಗೆ ಕನ್ನಡ ಭಾಷೆ ಸಮೃದ್ಧವಾಗಿ ಬೆಳೆಯಲು ಈ ಸಾಹಿತ್ಯ ಪ್ರಕಾರಗಳು ಕಾರಣವಾಗಿವೆ. ಅವುಗಳಲ್ಲಿ 'ಕಾದಂಬರಿ' ಒಂದು ಹೊಸ ದಾರಿಯನ್ನೇ ನಿರ್ಮಿಸಿದೆ.

ಆಧುನಿಕ ಭಾಷಾ ಸಾಹಿತ್ಯದಲ್ಲಿ ಕಾದಂಬರಿಯು ಅತ್ಯಂತ ಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಈ ಕಾದಂಬರಿಯ ಭಾಷೆ ಸಾಮಾನ್ಯ ಜನರ ಆಸೆ, ಅಭಿರುಚಿ ಹಾಗೂ ಸಂಸ್ಕೃತಿಯ ಮಟ್ಟವನ್ನು ವಿವರಿಸುವ ಮಾಧ್ಯಮವಾಗಿದೆ. ಆದ್ದರಿಂದಲೇ ಕಾದಂಬರಿ ಸಾಹಿತ್ಯಕ್ಕೆ ರೂಪ, ಗುಣಲಕ್ಷಣಗಳು, ನಿಯಮ, ನಿರ್ಬಂಧಗಳು ವಿಶೇಷವಾಗಿ ಕಂಡುಬರದಿದ್ದರೂ ಅದಕ್ಕೆ ಅದರದೇ ಆದ ತಾತ್ವಿಕ ಚೌಕಟ್ಟು ಇರುತ್ತದೆ. ಸಾಮಾನ್ಯವಾಗಿ 'ಕಾದಂಬರಿ' ಎಂದರೆ ಜೀವನ ಸಿದ್ಧಾಂತವನ್ನು ಪ್ರಯೋಗಾತ್ಮಕವಾಗಿ ವಸ್ತು, ಪಾತ್ರ ಮತ್ತು ಘಟನೆಗಳಿಂದ ವಿಸ್ತರಿಸುವ ಅಷ್ಟು ಮಾತ್ರವಲ್ಲದೆ ಅದನ್ನು 'ಕರತಲರಂಗಭೂಮಿ' ಎಂದು ಸಹ ಕರೆಯುತ್ತಾರೆ.

ಮಸಿ ಕಾಗದ, ವಿರಾಮ ಮತ್ತು ತಾಳ್ಮೆ ಇದ್ದರೆ ಯಾರೂ ಬೇಕಾದರೂ ಕಾದಂಬರಿಯನ್ನು ಬರೆಯಬಹುದೆಂಬ ಮಾತು ಕಾದಂಬರಿಯ ಸರಳ, ಸ್ವತಂತ್ರವಾದ ಸ್ವಚ್ಛಂದತೆಯನ್ನು ಕುರಿತು ಹೇಳುತ್ತದೆ ಆದರೆ ಸತ್ಯವಲ್ಲ. ಕಾದಂಬರಿ ಎಂದರೆ ಘಟನೆ ಮತ್ತು ಕ್ರಿಯೆಗಳೊಡನೆ ಅನುಭವಿಸಿ ಮಾಡಿದ

ಸಂಗತಿಗಳು. ಇವು ಜನಜೀವನದಲ್ಲಿ ಉಂಟಾಗಿ ಕಾದಂಬರಿಯ ಪಾತ್ರಗಳಾಗುತ್ತವೆ. ಕಾದಂಬರಿಯಲ್ಲಿ ಪಾತ್ರಗಳ ಸಂಭಾಷಣೆ, ಶೈಲಿ, ಜೀವನದ ಬಗೆಗಿನ ಒಂದು ನಿಶ್ಚಿತದೃಷ್ಟಿ ಬದುಕಿನ ಕೆಲವು ಸಮಸ್ಯೆಗಳು ಅವಶ್ಯಕವಾಗಿ ನಿರೂಪಿಸಲ್ಪಟ್ಟಿರುತ್ತವೆ. ಅಂತಹ ಕಾದಂಬರಿಗಳಲ್ಲಿ ಡಾ. ಶಿವರುದ್ರಕೆ.ಕಲ್ಲೋಳಿಕರ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿ ಒಂದು. ಈ ಕಾದಂಬರಿ ಉಪಭಾಷೆಯಲ್ಲಿ ರಚಿತವಾಗಿ ವಿಶೇಷತೆಯಿಂದ ಕೂಡಿದೆ.

ಇದಕ್ಕಿಂತ ಮುಂಚೆ ಇದೇ ಮಾದರಿಯ ಹಲವಾರು 'ಕನ್ನಡ' ಮತ್ತು 'ಮರಾಠಿ' ಕಾದಂಬರಿಗಳು ರಚನೆಯಾಗಿದ್ದವು. ಕನ್ನಡ ಕಾದಂಬರಿಗಳಲ್ಲಿ ದೇವನೂರ ಮಹಾದೇವರ 'ಒಡಲಾಳ' 'ಕುಮಸುಮಬಾಲೆ,' ಮನಜ ಅವರ 'ಮಾಗಿ' ಅರವಿಂದ ಮಾಲಗತ್ತಿಯವರ 'ಕಾರ್ಯ' ಮುಳ್ಳೂರ ನಾಗರಾಜರ 'ಮರಣ ಮಂಡಲ ಮಧ್ಯದೊಳಗೆ' ಆರ್.ವಿ.ಭಂಡಾರಿಯವರ 'ಬೆಂಕಿಯ ನಡುವೆ' ಚೆನ್ನಣ್ಣ ವಾಲೀಕರ ಅವರ 'ಹುಲಿಗೆಮ್ಮ,' ಬಿ.ಟಿ.ಲಲಿತಾನಾಯ್ಕ ಅವರ 'ನೆಲೆ-ಬೆಲೆ,' ಗೀತಾನಾಗಭೂಷಣ ಅವರ 'ಬದುಕು' ಮತ್ತು ಬರಗೂರು ರಾಮಚಂದ್ರಪ್ಪನವರ 'ಸೂರ್ಯ,' 'ಬೆಂಕಿ,' 'ಸೂತ್ರ,' 'ಹುತ್ತ,' 'ಒಂದು ಊರಿನ ಕಥೆ' ಹೀಗೆ ಹಲವಾರು ಕಾದಂಬರಿಗಳು ದಲಿತ ಬದುಕಿನ, ಭಾಷೆಯ, ಆಂತರಿಕ ವ್ಯವಸ್ಥೆಯ ಕುಟುಂಬ ರಚನೆ, ಆಚರಣೆ, ನಂಬಿಕೆ, ಹೊಸತನ, ಶಿಕ್ಷಣ, ಉದ್ಯೋಗ, ಮೀಸಲಾತಿ, ರಾಜಕೀಯ ಮತ್ತು ಆರ್ಥಿಕ ಸೌಲಭ್ಯಗಳ ಪರಿಣಾಮ ವಿವಿಧ ಘಟನೆಗಳನ್ನು ಒಳಗೊಂಡು ರಚನೆಯಾಗಿವೆ.

ಇನ್ನು ಕನ್ನಡದೊಂದಿಗೆ ಸಾಂಸ್ಕೃತಿಕ ಸಂಬಂಧ ಹೊಂದಿರುವಂತಹ ಮರಾಠಿ ಕಾದಂಬರಿಗಳಲ್ಲಿ 'ರಣಾಂಗಣ' ಕಾದಂಬರಿ ಮೊದಲಿಗೆ ರಚನೆಯಾಯ್ತು. ೧೯೭೦ರಲ್ಲಿ ಹರಿಬಾವು ಪಗಾರೆಯವರ 'ಯುಗಪ್ರವರ್ತಕ' ರಚನೆ ಆಯ್ತು. ಇದು ಅಂಬೇಡ್ಕರ ಕುರಿತಾಗಿದ್ದು ವಿಶಿಷ್ಟವಾಗಿತ್ತು. ಹೀಂ.ಗೋ. ಬನಸೋಡೆಯವರ ದಲಿತಾಂಚಾ ಮುಕ್ತಿ ಲಡಾ' ಎಂಬ ಕಾದಂಬರಿ ಬಂದಿತು. ಮತ್ತು ಕೇಶವ ಮೇಶ್ರಾಮರ 'ಹಕೀಕತ್ ವ ಜಟಾಯು' ಎನ್ನುವ ಎರಡು ಕಾದಂಬರಿಗಳು ರಚನೆಯಾಗಿ ದಲಿತರ ಭಾವನೆ ಪ್ರಾದೇಶಿಕ ಭಾಷೆಯ ಮೂಲಕ ಧ್ವನಿಯೆತ್ತಿತು.

ಕಾಲವು ಗತಿಸಿದಂತೆ ಒಲವು-ನಿಲವು, ತಂತ್ರಜ್ಞಾನ-ತತ್ವಜ್ಞಾನ ಸಾಮಾಜಿಕ ಆಂದೋಲನಗಳು, ರಾಜಕೀಯ ಸ್ಥಿತ್ಯಂತರಗಳು ಇವುಗಳನ್ನೆಲ್ಲ ಭಾಷಿಕ (ಸಾಹಿತ್ಯ)ವಾಗಿ ದಾಖಲಿಸಲು ಸಹೃದಯರೊಂದಿಗೆ ಸರಾಗವಾಗಿ ಮಾತಾಡಲು 'ಕಾದಂಬರಿ' ಎನ್ನುವುದು ಸಮರ್ಥವಾದ ಮಾಧ್ಯಮವಾಗಿ ಹೊರಹೊಮ್ಮಿತು.

ಕನ್ನಡ ಸಾಹಿತ್ಯದ 'ಪ್ರಗತಿಶೀಲ' 'ನವ್ಯ' ಸಂದರ್ಭದಲ್ಲಿ ಕಾದಂಬರಿಯು ಉದಯಿಸಿತು. ಈ ಕಾದಂಬರಿಗಳಿಗೆ ಪೂರಕವಾಗಿ 'ಅಂಬೇಡ್ಕರ,' 'ಲೋಹಿಯಾ,' 'ಕಾರ್ಲ್‌ಮಾರ್ಕ್ಸ್' ವಿಚಾರಗಳು ಮತ್ತು ಪರಿವರ್ತನಾಶೀಲ ಸಾಮಾಜಿಕ ಸಾಂಸ್ಕೃತಿಕ ಸಂಘರ್ಷಗಳು ಅಧ್ಯಯನ ವಸ್ತುಗಳಾದವು. ದಲಿತ ಸಾಹಿತ್ಯದಲ್ಲಿಯೂ ಕಾದಂಬರಿ ಭಾಷಿಕವಾಗಿ ವಿಶಾಲವಾಗಿ ಬೆಳೆಯಿತು. ೧೯೫೦ರಲ್ಲಿ ಜಿ. ವೆಂಕಟಯ್ಯನವರ

'ಮುರಿದ ಮದುವೆ' 'ನೊಂದ ಜೀವ,' 'ಚಂದನದ ಕೊರಡು' ಕಾದಂಬರಿಗಳು ದಲಿತ ಸಮಾಜದ ವಿವಿಧ ನಿಲುವು ಸಂಸ್ಕೃತಿಗಳನ್ನು ವ್ಯಕ್ತಪಡಿಸಿದವು.

'ಅಲ್ಬರ್ಟ್ ಕಾಮು' ಹೇಳಿದಂತೆ ಕಲಾವಿದ ಜೀವನದಿಂದ ತನ್ನನ್ನು ಬೇರ್ಪಡಿಸಿಕೊಳ್ಳುದಿಲ್ಲ. ಜೀವನವನ್ನೇ ಸಾಧನವನ್ನಾಗಿ ಮಾಡಿಕೊಂಡು ತನ್ನನ್ನು ತಾನು ಅರ್ಪಿಸಿಕೊಳ್ಳುವನು ಅದರಂತೆ ಸಾಹಿತ್ಯ ಕ್ಷೇತ್ರದ ಭಾಷೆ ಸಂಸ್ಕೃತಿ ಯಾವುದೇ ಪ್ರಯೋಗಶೀಲತೆ ಆಗಲಿ ಇದೇ ತಳಹದಿಯ ಮೇಲೆ ನಿಂತರೆ ಹಿಡಿದ ಕಾರ್ಯ ಸಫಲವಾಗುತ್ತದೆ.

ನಾಲ್ಕು ಸಿನಿಮಾಗಳನ್ನು ನೋಡಿ ಎರಡು ಕಾದಂಬರಿಗಳನ್ನು ಬರೆದುಬಿಡಬಹುದೆನ್ನುವ ಭಾವನೆಯುಳ್ಳವರಿಗೆ ಬದಲಾಗಿ, ಮಾನವ ಸ್ವಭಾವದ ಬಹುಮುಖ ಪರಿಚಯವನ್ನು, ಸಂಕೀರ್ಣತೆಯನ್ನು, ಬದಲಾಗುತ್ತಿರುವ ಜನರ ಜೀವನದ ಆಂತರಿಕ ಬಾಹ್ಯ ಕಂಡು ಖಂಡಿಸುವ ಶಕ್ತಿಯನ್ನು ಕರಗತಮಾಡಿಕೊಳ್ಳಲು ತುಡಿಯುತ್ತಿರುವ ಭಾವನೆಗಳನ್ನು ಹುಟ್ಟು ಹಾಕುವ ಕಾದಂಬರಿಗಳು ಬರಬೇಕಾಗಿದೆ. ಈ ದೃಷ್ಟಿಯಲ್ಲಿ ಬಂದ ಡಾ. ಶಿವರುದ್ರ ಕೆ. ಕಲ್ಲೋಳಿಕರ್ ಸಾಕ್ಷಿ. ಅವರ ಹೊಲಗೇರಿ ರಾಜಕುಮಾರ ಕಾದಂಬರಿ ತುಂಬಾ ವಿಶಿಷ್ಟವಾದುದಾಗಿದೆ.

ಕಾದಂಬರಿಯಲ್ಲಿ ಪ್ರಮುಖವಾಗಿ ಕಥಾ ಸಂವಿಧಾನ, ಪಾತ್ರ ಚಿತ್ರಣ, ಸಂಭಾಷಣೆ ಅಥವಾ ಸಂವಾದ ಆವರಣ ಭಾಷೆ, ತಂತ್ರ ಮತ್ತು ಶೈಲಿ ಜೊತೆಗೆ ಜೀವನ ಸಿದ್ಧಾಂತವನ್ನು ಒಳಗೊಂಡಿರುವುದನ್ನು ಕಾಣಬಹುದು. ನಾಟಕ ಸಾಹಿತ್ಯಕ್ಕೆ ಬೇಕಿರುವ ರಂಗಭೂಮಿ, ಪ್ರೇಕ್ಷಕ, ನಟಿ ಯಾವುದೂ ಬೇಕಾಗಿರುವುದಿಲ್ಲ. ನವಿರಾದ ನಿರೂಪಣೆಯಿಂದ ಕೂಡಿದ ಒಂದು ಕಥೆಯನ್ನು ಪರಿಣಾಮಕಾರಿಯಾಗಿ ವಸ್ತುವಿನ ಮನಸ್ಥಿತಿಯನ್ನು ಅರ್ಥಮಾಡಿಕೊಂಡು ಕಾದಂಬರಿಕಾರ ನಿರೂಪಿಸಿದರೆ ಅದೊಂದು ಒಳ್ಳೆಯ ಕಾದಂಬರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ 'ಹೊಲೆಗೇರಿಯ ರಾಜಕುಮಾರ' ಕಾದಂಬರಿಯು ಕುತೂಹಲಕಾರಿಯಾದ ಕಥೆಯನ್ನು ಒಳಗೊಂಡು ಎಲ್ಲರ ಮೆಚ್ಚುಗೆ ಪಡೆದ ಮಹತ್ವದ ಕಾದಂಬರಿಯಾಗಿದೆ.

ಈ ಕಾದಂಬರಿಯಲ್ಲಿ ಪ್ರಾದೇಶಿಕ ಭಾಷೆ, ಶೈಲಿ ಕಥಾ ಆವರಣದಲ್ಲಿ ಸಾಮಾಜಿಕ, ಇತಿಹಾಸ ಮತ್ತು ವರ್ತಮಾನ ಈ ಮೂರು ಅಂಶಗಳಲ್ಲಿ ಪ್ರಾದೇಶಿಕವ್ಯಕ್ತಿ, ಊರುಗಳ ಹೆಸರು, ಸತ್ಯ ಮತ್ತು ಕಲ್ಪನೆ ಲೋಕವನ್ನೇ ತೆರೆದಿಡುವಂತಾಗಿದೆ. ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ರೂಪಾಂತರಗೊಳ್ಳಲು ಯತ್ನಿಸಿದ ಈ ಕ್ರಿಯೆ ಅನನ್ಯವಾದದ್ದು. ಹುಟ್ಟಿದಂದಿನಿಂದಲೇ ಮಾದೇವನು ಪರಸಂಸ್ಕೃತಿಗೆ ಬಂದಿರುದರಿಂದ ಅದೇ ಅವನ ಸ್ವಂತದ್ದಾಯ್ತು. ಆದರೆ ತಾನು ಮೇಲ್ವರ್ಗಕ್ಕೆ ಸೇರಿದವನೆಂದು ತಿಳಿದ ನಂತರ ಅವನ ವರ್ತನೆಯಲ್ಲಿ ಬದಲಾವಣೆ ಕಂಡಿತು. ಅದುವರೆಗೂ ಇದ್ದ ತನ್ನ ಸಂಸ್ಕೃತಿ (ಹೊಲೆಯ) ಕೀಳೆಂಬ ಭಾವನೆ ಅವನಲ್ಲಿ ಹೊಕ್ಕು ಆ ಕೆಳಸಂಸ್ಕೃತಿಯನ್ನು ಬಿಡಲು ಹಾತೊರೆಯುವನು ಅಲ್ಲದೆ ಅನೇಕ ಕಷ್ಟಗಳಿಗೆ ಒಳಗಾಗುವನು.

ಈ ಕಾದಂಬರಿ ಈವರೆಗಿನ ದಲಿತ ಸಾಹಿತ್ಯದ ಅನುಭವಕ್ಕಿಂತ ವಿಭಿನ್ನವೂ, ವಿಶಿಷ್ಟವೂ ಆದ ಲೋಕವೊಂದನ್ನು ಅತ್ಯಂತ ಪರಿಣಾಮಕಾರಿಯಾಗಿ ಬಿಚ್ಚಿಡುತ್ತದೆ. ಹೊಲಗೇರಿ ಸಂಸ್ಕೃತಿ, ಕ್ಷತ್ರಿಯ ಸಂಸ್ಕೃತಿ, ಶಿಕ್ಷಣ-ನೌಕರಿ, ಅಂಬೇಡ್ಕರ ಆಲೋಚನೆ ಮತ್ತು ಧೋರಣೆ ಇವೆಲ್ಲವೂ ನಾಯಕ (ಮಾದೇವ) ಕೇಂದ್ರಿತ ಪಾತ್ರದಲ್ಲಿ ಕಂಡುಬರುತ್ತವೆ. ಮಾನಮರ್ಯಾದೆ ಗೌರವ ಅಭಿನಂದನೆಗಳು ಕೇವಲ ಮೇಲ್ವರ್ಗದ ಸೊತ್ತುಗಳಲ್ಲ ಎಂದು ಒತ್ತಿ ಹೇಳುತ್ತದೆ.

ಈ 'ಹೊಲಗೇರಿಯ ರಾಜಕುಮಾರ' ಕಾದಂಬರಿ ಕನ್ನಡ ದಲಿತ ಸಾಹಿತ್ಯಕ್ಕೆ ನೀಡಿದ ಕೊಡುಗೆಯಾಗಿದೆ. ಸ್ವಾಭಿಮಾನದ ಪಾಠ ಕಲಿಸುವುದರ ಜೊತೆಗೆ, ವಿಭಿನ್ನವಾದ ನಿರೂಪಣಾ ತಂತ್ರ ಹೊಸತನ ಅಡಗಿಸಿಕೊಂಡು ಅನೇಕ ಪ್ರಶಸ್ತಿಗಳಿಗೆ ಪಾತ್ರವಾಗಿದೆ. ಕಾದಂಬರಿಯಲ್ಲಿ ಬರುವ ಪಾತ್ರಗಳಾದ ಖಂಡೋಬ, ಜಾನೂಬಾ, ಹೀರಾ, ಸುಮತಿ, ಪರಶ್ಯಾ ಮತ್ತು ವಿಮಲಿ ಎಲ್ಲವೂ ಜೀವಂತ ಪಾತ್ರಗಳು. 'ಜಾತಿ ಪ್ರಜ್ಞೆ' ಹೇಗೆ ಮನುಷ್ಯನನ್ನು ಪ್ರಸ್ತುತ ಸಮಾಜದಲ್ಲಿ ಕಾಡುತ್ತಿದೆ ಸ್ವಾಭಿಮಾನಕ್ಕಿಂತ ಆತ್ಮಪ್ರಜ್ಞೆ ಅಥವಾ ಪ್ರತಿಷ್ಠೆ ಎಂಥ ದುರಂತಗಳಿಗೆ ಕಾರಣವಾಗಬಲ್ಲದು ಎಂಬ ಸೂಕ್ಷ್ಮ ಸಂವೇದನೆಗಳನ್ನು ಅತ್ಯಂತ ಸಮರ್ಥವಾಗಿ ಅಭಿವ್ಯಕ್ತಿಸುತ್ತದೆ.

ಪಾತ್ರಪೋಷಣೆ, ಬಳಸುವ 'ಭಾಷೆ' ಅಭಿವ್ಯಕ್ತಿಸುವ ತಂತ್ರ ಕಲಾತ್ಮಕತೆಯಿಂದ ಕೂಡಿದೆ. ಮಾದೇವ ತನ್ನ ಮೂಲ ಹುಡುಕಿಕೊಂಡು ಹೋಗಿ ಮತ್ತೆ ಮರಳಿ ಬರುವವರೆಗಿನ ಕಾದಂಬರಿ ಭಾಗ ಓದುಗನನ್ನು ಹಿಡಿದಿಡುತ್ತದೆ. ಬೆಳಗಾವಿ ಜಿಲ್ಲೆಯ ರಾಯಭಾಗ ತಾಲೂಕಿನ ಗಟ್ಟಿ 'ಕನ್ನಡ ಅಸ್ಪೃಶ್ಯಭಾಷೆ', ಕಾದಂಬರಿಗೆ ಉತ್ತಮ ಶಕ್ತಿ ನೀಡಿದೆ. 'ಅಕ್ರಮಸಂತಾನ' (ಶರಣಕುಮಾರ ಲಿಂಬಾಳೆ) 'ಉಚಲ್ಯಾ' (ಲಕ್ಷ್ಮಣಗಾಯಕವಾಡ) 'ಗೌರ್ಮೆಂಟ್ ಬ್ರಾಹ್ಮಣ' (ಅರವಿಂದ ಮಾಲಗತ್ತಿ) ಎಂಬ ಮೂರು ಮುಖ್ಯವಾದ ದಲಿತ ಸಂವೇದನೆ ಕೃತಿಗಳ ಸಾಲಿಗೆ ಸೇರುವ ಇನ್ನೊಂದು ಕೃತಿಯೆಂದರೆ ಈ 'ಹೊಲೆಗೇರಿಯ ರಾಜಕುಮಾರ' ಆಗಿದೆ. ಅಪ್ಪಟ ದಲಿತ ಸಾಹಿತ್ಯ ಕೃತಿಗಳಲ್ಲಿ ಮುಖ್ಯ ಸ್ಥಾನ ಪಡೆದುಕೊಂಡಿದೆ. ಕನ್ನಡ 'ಕಾದಂಬರಿ' ಪ್ರಪಂಚಕ್ಕೆ ಹೊಸದಿಗಂತದತ್ತ ಹೊರಡಲು ಮುಂದಾದ ಅಥವಾ ಹೊರಟಿರುವ ಕಾದಂಬರಿ ಇದಾಗಿದೆ.

ಪ್ರಸ್ತುತ ಕಾದಂಬರಿಯಲ್ಲಿನ ಭಾಷೆಯನ್ನು ಕುರಿತಂತೆ ಈ ಅಧ್ಯಯನ ಇದೆ. ಲೇಖಕರು ತಮ್ಮ ಭಾಗದ ಭಾಷೆಯನ್ನು ಬಳಸಿ ಪಾತ್ರಪೋಷಣೆ ಮಾಡಿರುವುದು, ಅಭಿವ್ಯಕ್ತಿಸುವ ತಂತ್ರ ಹೊಸತನದಿಂದ ಕೂಡಿದೆ. ಪ್ರಾದೇಶಿಕ ಭಾಷೆಯನ್ನು ಬಳಸಿದರೂ ಅಲ್ಲಿನ ಸಾಮಾಜಿಕ ನೆಲೆಯನ್ನು ನೀಡುವ ಭಾಷೆಯನ್ನು ತಂದಿರುವುದು ಈ ಕಾದಂಬರಿಗೆ ಶಕ್ತಿಯನ್ನು ನೀಡಿದೆ. ಭಾಷಾ ವಿಶ್ಲೇಷಣೆ ಎಂದರೆ ಪಾರಂಪರಿಕವಾಗಿ ನಡೆದು ಬಂದಿರುವ ವಿವರಣಾತ್ಮಕ ಮಾದರಿಯದಲ್ಲ. ಇಲ್ಲಿ ಧ್ವನಿ, ಧ್ವನಿಮಾ, ಆಕೃತಿಮಾ ಇತ್ಯಾದಿಗಳ ವಿವರಣೆ ಇಲ್ಲ. ಒಟ್ಟಾರೆಯಾಗಿ ಕಾದಂಬರಿಯ ಭಾಷಾ ಸ್ವರೂಪವನ್ನು ಕಾದಂಬರಿಯೊಳಗೆ ಕಂಡುಬರುವ ಭಾಷಾ ಬೆಳವಣಿಗೆಯನ್ನು ಆಧರಿಸಿ ಕಟ್ಟಿಕೊಡುವುದಾಗಿದೆ. ಕಾದಂಬರಿಕಾರನ ಪ್ರಾದೇಶಿಕ ಭಾಷಾ ಮಮತೆಯಲ್ಲಿ ಕಂಡುಬರುವ ಅಲ್ಲಿನ ಪದಗಳು, ಅನ್ಯಭಾಷಾ ಪ್ರಭಾವದಲ್ಲಿ ಕನ್ನಡದೊಳಗೆ ಬೆರೆತು

ಹೋಗಿರುವ ಪದಗಳು, ಆಧುನಿಕತೆಯ ಪರಿಣಾಮವಾಗಿ ಒಳನುಸುಳುತ್ತಿರುವ ಇಂಗ್ಲಿಷ್ ಪದಗಳು ಭಾಷಾ ಬಳಕೆಯಲ್ಲಿ ತರಲಾಗಿರುವ ವೈಶಿಷ್ಟ್ಯಗಳನ್ನು ನಿರೂಪಿಸುವುದಾಗಿದೆ. ಅಧ್ಯಾಯ ಒಂದರಲ್ಲಿ ಉದ್ದೇಶ ಸ್ವರೂಪವನ್ನು ವ್ಯಕ್ತಪಡಿಸಲಾಗುವುದು. ಅಧ್ಯಯನದ ವ್ಯಾಪ್ತಿ ಸ್ವರೂಪವನ್ನು ಸಾದರಪಡಿಸಲಾಗುವುದು.

ಅಧ್ಯಾಯ ಎರಡರಲ್ಲಿ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಕಥಾವಿನ್ಯಾಸವನ್ನು ನೀಡಲಾಗಿದೆ.

ಅಧ್ಯಾಯ ಮೂರು ಕಾದಂಬರಿಯಲ್ಲಿ ಬರುವ ಪಾತ್ರಗಳು ಕಥೆಯನ್ನು ಕಟ್ಟಲು ಹೇಗೆ ಸಹಾಯಕವಾಗಿವೆ ಎಂದು ತಿಳಿಸುತ್ತವೆ.

ಅಧ್ಯಾಯ ನಾಲ್ಕರಲ್ಲಿ ಮುಖ್ಯವಾದ ಭಾಷೆ ಮತ್ತು ಶೈಲಿಯನ್ನು ವಿಶ್ಲೇಷಣೆ ಮಾಡಲಾಗುತ್ತದೆ ಪ್ರಾದೇಶಿಕ ಭಾಷೆಯ ಜೊತೆಗೆ ಇನ್ನಿತರ ಭಾಷೆಗಳ ಬಳಕೆ ಹೇಗಿದೆ ಎಂಬುದರ ಬಗ್ಗೆ ವಿವರವಾದ ವಿಶ್ಲೇಷಣೆ ಇದೆ.

ಅಧ್ಯಾಯ ಐದು ಸಂಪ್ರಬಂಧದ ಸಮರೋಪದ ಭಾಗ ಅಧ್ಯಯನದಲ್ಲಿ ಫಲಿತಗಳನ್ನು ನೀಡಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕಾಗಿ ಉಪಯೋಗಿಸಿಕೊಂಡ ಗ್ರಂಥಗಳ ಪಟ್ಟಿಯಿದೆ.

## ಅಧ್ಯಾಯ ೨

# 'ಹೊಲಗೇರಿ ರಾಜಕುಮಾರ' ಕಾದಂಬರಿಯ ಕಥಾವಿನ್ಯಾಸ

ವಿಶೇಷ ಸ್ಥಾನವಿದೆ. ಆದರ್ಶ ವಾಸ್ತವ ಎಂಬ ಅಂಶಗಳನ್ನಿಟ್ಟುಕೊಂಡು ರಚನೆಯಾಗುತ್ತಿದ್ದ ಸಾಹಿತ್ಯದ ದಿಕ್ಕನ್ನು ಬದಲಾಯಿಸಿ, ಕಲ್ಪನಾ ಲೋಕದಿಂದ ಅನುಭವದ ಆಧಾರದ ಮೇಲೆ ಸಾಹಿತ್ಯ ರಚನೆ ಆರಂಭವಾಯಿತು. ಹೀಗೆ ರಚನೆಯಾದ ಸಾಹಿತ್ಯದಲ್ಲಿ ದಲಿತಬದುಕಿನ ಪ್ರಜ್ಞೆ, ಅನುಭವ, ಅವಮಾನ, ಆಕ್ರೋಶ, ಸಿಟ್ಟು, ಸೆಡವು ಹೀಗೆ ಬದುಕಿನ ವಿವಿಧ ಮುಖಗಳ ಅನಾವರಣ ಸಾಧ್ಯವಾಯಿತು. ಅನೇಕರು ಸಾಹಿತ್ಯ ರಚನೆ ಮಾಡಿದರು. ಇದಕ್ಕೂ ಮೊದಲೇ ಶಿವರಾಮ ಕಾರಂತರಂತಹವರು ದಲಿತ ಬದುಕನ್ನು ಕುರಿತಂತೆ ಚೋಮನದುಡಿ ಕಾದಂಬರಿಯಲ್ಲಿ ಬೆಳಕು ಚೆಲ್ಲಿದ್ದರು. ಇತ್ತೀಚೆಗೆ ಬಂದ ಡಾ. ಶಿವರುದ್ರ ಕೆ.ಕಲ್ಲೋಳಿಕರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯು ಕನ್ನಡ ಸಾಹಿತ್ಯದಲ್ಲಿ ಹೊಸ ಬಗೆಯ ಪ್ರಯೋಗವನ್ನು ಸಮರ್ಥವಾಗಿ ಸೃಜನಶೀಲತೆಯಿಂದ ಪ್ರಯೋಗಿಸಿದ್ದು ಗಮನಾರ್ಹವಾದುದಾಗಿದೆ.

ಕಾದಂಬರಿಯು ಗತ ಕಥನವಾಗಿದೆ. ಮತ್ತು ವರ್ತಮಾನದ ಸ್ಥಿತಿಯೂ ಆಗಿದೆ. ಕಾಲದೇಶಗಳ ಗಡಿಗಳನ್ನು ಹೊಂದಿದೆ. ಗತದ ಅನುಭವಗಳು ವರ್ತಮಾನದ ಬದುಕನ್ನು ಪ್ರಭಾವಿಸುತ್ತಿರುತ್ತವೆ ಮತ್ತು ಒಂದು ಹೊಸ ಬದುಕನ್ನು ಕಟ್ಟುವಲ್ಲಿಯೂ ತುಂಬಾ ನೆರವಾಗುತ್ತವೆ. ಈ ಹಿನ್ನೆಲೆಯಲ್ಲಿ 'ಹೊಲಗೇರಿಯ ರಾಜಕುಮಾರ' ಕಾದಂಬರಿ ಚಾರಿತ್ರಿಕ ಘಟನೆಯನ್ನೊಳಗೊಂಡ ವರ್ತಮಾನದ ಕತೆಯಾಗಿದೆ. ವರ್ತಮಾನದಲ್ಲಿ ನಿಂತು ಚಾರಿತ್ರಿಕ ಕತೆಯನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ ಎಂಬ ಅಂಶ ಬಹಳಷ್ಟು ಮಹತ್ವದ್ದಾಗಿದೆ.

ಬೆಳಗಾವಿ ಜಿಲ್ಲೆಯ ೫೬೫೦ ಎಕರೆ ಭೂಮಿ ಚಂದ್ರಪ್ಪ ಕಲ್ಲಪ್ಪ ಕೋಲ್ಕಾರ್ ಎನ್ನುವ ಪೋಸ್ಟ್ ಮಾಸ್ತರನಿಗೆ ಸೇರಬೇಕಾಗಿರುತ್ತದೆ. ಅವನೇ ಆಸ್ತಿಯ ವಾರಸುದಾರ. ನಾನು ಮೂಲತಃ ರಾಜವಂಶಸ್ಥ

ಕುರುಂದವಾಡ ಸಾಮ್ರಾಜ್ಯ ನನ್ನದು ನನ್ನನ್ನು ಈ ಸ್ಥಿತಿಯಲ್ಲಿಟ್ಟಿದ್ದಾರೆ. (ಕೆಳಜಾತಿ) ನನಗೆ ಆಸ್ತಿ ಬೇಕು ಸಂಬಂಧಿಸಿದ ಪತ್ರಗಳು ಇಲ್ಲಿವೆ ಎಂದು ವಿಭಾಗಾಧಿಕಾರಿಗಳಲ್ಲಿ ಬೇಡಿಕೆ ಇಟ್ಟು ಎಷ್ಟೋ ವರ್ಷಗಳು ಆದರೂ ಯಾರೂ ಗಮನಕೊಡುತ್ತಿಲ್ಲ ಎಂದು ಆಗಾಗ ಕಾದಂಬರಿಗೆ ಮುನ್ನುಡಿ ಬರೆದ ಸರಜೂ ಕಾಟ್ಕರರಿಗೆ ಹೇಳುತ್ತಿದ್ದನಂತೆ. ಇನ್ನು ಲೇಖಕರಾದ ಡಾ.ಶಿವರುದ್ರ ಕೆ. ಕಲ್ಲೋಳಿಕರ ಅವರನ್ನೂ ಬೇಟಿಯಾಗಲು ತವಕಪಡುತ್ತಿದ್ದನಂತೆ ಆದರೆ ಕಲ್ಲೋಳಿಕರರು ಕೊನೆಗೂ ಸಿಗದೆ ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ ತೀರಿಕೊಂಡನು.

ಅದೇ ನೈಜ ಕಥೆಯನ್ನು ಕಲ್ಲೋಳಿಕರರು ಕಾದಂಬರಿಯನ್ನಾಗಿ ಬರೆಯುವಾಗ ಹಲವು ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾರೆ. ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ ಇಲ್ಲಿ ಮಾದೇವ ಆಗಿದ್ದಾನೆ. ಇವನೇ ಈ ಕಾದಂಬರಿಯ ನಾಯಕ ಮಾದೇವನು ತನ್ನ ಕೌಟುಂಬಿಕ ಜೀವಿತದಲ್ಲಿ ಯಾವಾಗಲೂ ನಾನು ರಾಜ ನಾನು ಮರಾಠ, ನಾನು ಕ್ಷತ್ರಿಯ ಎಂಬ ಭಾವನೆಗಳಲ್ಲಿಯೇ ಇರುತ್ತಾನೆ. ಹೆಂಡತಿಯಾದ ಸುಮತಿಯು ಅವನಿಗೆ ಅಂಥವೆಲ್ಲಾ ಕಲ್ಪನೆಗಳನ್ನು ಬಿಟ್ಟು ಬಿಡ್ರಿ ಅಂದರೂ ಅವನು ತನ್ನ ಲೋಕದಲ್ಲಿಯೇ ಇರಬೇಕಾದರೆ, ರಾತ್ರಿ ಕನಸೊಂದು ಬಿತ್ತು. ಆ ಕನಸು ಸಾಮ್ರಾಜ್ಯ ರಾಜ, ಮಂತ್ರಿ, ಸೇನಾಪತಿ, ದಂಡಾಧಿಕಾರಿ, ಸೈನಿಕ, ಆಪ್ತಸಹಾಯಕ, ಯುದ್ಧ, ರಕ್ತ, ಜಯ, ಹೀಗೆ ಕ್ರಮಾನುಸಾರವಾಗಿ ಕಾಣಬೇಕಾದರೆ ಜಮುಖಂಡಿ, ಮುಧೋಳ, ಸಾಂಗ್ಲಿ ರಾಜರು ಕುರುಂದವಾಡದ ಮೇಲೆ ಯುದ್ಧಕ್ಕೆ ಬಂದಂತೆ ಕಂಡು ಮಾದೇವ ಕನಸಿನಲ್ಲಿ 'ಮಾಧವರಾವ ಗಾಯಕವಾಡ' ಎಂಬ ಹೆಸರಿನೊಂದಿಗೆ ಯುದ್ಧ ಆರಂಭ ಮಾಡುತ್ತಾನೆ.

ಇಬ್ಬರ ನಡುವೆ ಕದನ ಆಗುವಾಗ ಮಾದೇವ ಕಾಲಿನಿಂದ ಒದೆಯಬೇಕಾದರೆ ಸುಮತಿಯ ಡುಬ್ಬದ ಮೇಲೆ ಬೀಳುತ್ತಿತ್ತು ಆಗ ಆಕೆ ''ಏ! ಏನಾಗೇತ್ರಿ ನಿಮಗ, ಹುಚ್ಚುಗಿಚ್ಚು ಹಿಡಿದೈತೇನೆ?'' ಎಂದು ನೋಯುತ್ತಿರುವ ಸೊಂಟವನ್ನು ಸರಿಪಡಿಸಿಕೊಳ್ಳುತ್ತಾ ''ಇದರ ಮಾರಿ ಮಣ್ಣಾಗಡಗ್ಲಿ ಹೆಂಗೆಂಗರೇ ಮಾಡತೈತಿ ಯಾರದರೇ ಜಿಂವಾ ತುಗೋಳುದು'' ಎಂದು ಶಪಿಸುತ್ತಿದ್ದಳು.

ಆದರೂ ಮಾದೇವ ಹಾಗೆಯೇ ಕನಸಿನ ಕೋಪದಲ್ಲಿರಬೇಕಾದರೆ ಹೆಂಡತಿ ಒಂದು ಬಕೆಟ ತುಂಬಾ ನೀರು ಹಾಕಿದಳು ಅವನು ನನಗೆ ಎದುರಾಳಿಗಳು ಚೂರಿ ಹಾಕಿದರು ಮೈಯೆಲ್ಲ ಇದೆಲ್ಲ ರಕ್ತ ಎಂಬಂತೆ ಅಂದುಕೊಂಡು ಒದ್ದಾಡಿದನು. ಸುಮತಿ ಗಟ್ಟಿಯಾಗಿ ಚೀರಾಡಿದಳು ಅವನಿಗೆ ಎಚ್ಚರವಾಯಿತು. ಬೆಳಗಾಗಲು ಇನ್ನು ''ಒಂದು ತಾಸು ಟೈಮು ಇತ್ತು ಸುಮತಿಗೆ ಒಂದು ಕಪ್ಪ ಚಹಾರೇ ಮಾಡಿಕೊಡ'' ಎಂದು ಕೇಳಿದಾಗ ''ಯಾಕ ಚಾ ಕುಡದು ಇನ್ನೊಂದು ಕೈ ನನ್ನ ನೋಡಬೇಕಂತ ಮಾಡೀರಿ ಏನ? ಅಲಗರ್ಜಿ ಹೆಂಗಸ ಆಗಿದ್ರೆ ನಿಮ್ಮ ಹೊಡೆತಕ್ಕ ನಡ ಮುರದಾ ಹೋಗುತ್ತಿತ್ತು'' ಎನ್ನುತ್ತಾ ಎಂಥಾದರೂ ಪತಿಯೇ ಪರಮ ದೈವ ಎಂಬಂತೆ ಚಹಾ ತಂದು ಕೊಟ್ಟಳು.

ನಂತರ ಅಪ್ಪೋತ್ತಿಗೆ ಸಮಯ ೮ ೧/೨ ಗಂಟೆ ಆಗಿತ್ತು. ಮಗಳು 'ಅಂಬಾ' ಬಂದು ಬಾಬಾ... ಬಾಬಾ.... ಶಾಲೆಯಲ್ಲಿ ಒಂದು ಹುಡುಗಿ ನನಗೆ ಮಹಾರ ಜಾತಿ ನೀನು ಕೆಳಜಾತಿ ಎಂದು ಬೇರೆ ಹುಡಿಗೀರನ್ನ ಸಹಿತ ಬಗಲಲ್ಲಿ ಕೂಡದಂತೆ ಹೇಳುವಳು. ನಮ್ಮ ಮನಿ ಕಡಿ ಬರಲಿ ನೋಡ್ಕೊತೀನಿ ಅಂದಳು. ಆಗ ಅಪ್ಪ ನಿದ್ದೆಯಿಂದ ಎದ್ದು ಇಲ್ಲಮ್ಮ ಹಾಗೆಲ್ಲಾ ಅನ್ನಬಾರದು ನಾವು ಕೂಡ ಮರಾಠ ಕ್ಷತ್ರಿಯವಂಶ ಆ ಹುಡುಗಿ ತಿಳಿದಂಗೆ ಮಹಾರ ಅಲ್ಲ. ಹೀಗೆ ತಂದೆ ಮಗಳು ಪ್ರಶ್ನೋತ್ತರವಾಗಿ ಮಾತಾಡಬೇಕಾದರೆ ಸುಮತಿ ''ಏ ಅಂಬಾ ಸಾಲೀಗಿ ಟೈಮು ಆಗೈತಿ ಯಾಕ ತಯಾರಾಗೂದಿಲ್ಲೇನ?'' ಎನ್ನುತ್ತಾಳೆ. ಆಕೆ ಗಂಡನಿಗೆ ನಿಮಗೂ ಹೊತ್ತುಗಿತ್ತು ತಿಳೀತೈತೋ ಇಲ್ಲೋ? ಇನ್ನು ಹಲ್ಲ ಸಹಿತ ತಿಕ್ಕೊಂಡಿಲ್ಲ ನಾವ ಶಾಣವ್ವ ಕುಳಿ ಅಂತ ಕುಂತರ ಹೊಟ್ಟಿ ತುಂಬತೈತೇನು? ಎಂಥೆಂಥಾ ರಾಜರೆಲ್ಲಾ ಹಾಳಾಗಿ ಹೋದ್ರು ನೀವ ಈಗ ರಾಜಾ ಆಗೋ ಕನಸ ಕಾಣಾಕತ್ತೀರಿ ಇರೋದೊಂದ ತಲಿಕೆಡಿಸಿಕೊಂಡೀರಿ ಏಳ್ರಿ, ಆಫೀಸಿಗಿ ಟಾಯಿಮ ಆಗೈತಿ ಎಂದು ಅಂಬಾಳಿಗೆ ಮೈ ತೊಳೆಯಲು ಹೋದಳು.

ಮಗಳು ಬಾಬಾ ನಾನು ಬರ್‍ತೀನಿ ಜೊತೆಗೆ ಅಂದದಕ್ಕೆ ಇಲ್ಲಾ ನಾನೇ ಶಾಲೆಗೆ ಬರುವೆ ಅಂತ್ಹೇಳಿ ರಮಿಸಿ ಹೋದನು. ಅಪ್ಪೋತ್ತಿಗೆ ಸಹೋದ್ಯೋಗಿ ಮೋರೆ ಅರೆ ಕಾಂಬಳೆ ಎಷ್ಟೊತ್ತು ಶಿಫ್ಟ ಟೈಮು ಗೊತ್ತಿಲ್ಲವೇ ಸಾಹೇಬ್ರು ನಿನ್ನ ಕರೆದರು ನೋಡು ಎಂದನು.

ತರುವಾಯ ಸಹೋದ್ಯೋಗಿಯಾಗಿ ಸೇರಿಕೊಂಡಿದ್ದ ಪಾಟೀಲ ಮಾದೇವನಿಗೆ ಕಾಂಬಳೇ ನಿಮ್ಮ ಹೊಲೇರ ಮಂದಿ ಪುಣ್ಯ ಮಾಡಿ ಬಂದೀರಿ ನೋಡು ನನಗಿಂತ ಮುಂಚೆ ನಿನಗೆ ಪ್ರಮೋಶನ್ ಸಿಕ್ತು. ಹೌದು ನಮ್ಮ ಜನರಲ್ಲಿಯೇ ಅನೇಕ ಜನ ತೀರ ಬಡವರಿದ್ದಾರೆ ಅವರಿಗ್ಯಾಕೆ ಸರ್ಕಾರ ಸವಲತ್ತು ನೀಡುತ್ತಿಲ್ಲ ಎಂದು ಅನಲಾರದ ಅಂದದ್ದಕ್ಕೆ ಬೆಂಕಿ ಕೆಂಡದಂತಾಗಿ ಮಾದೇವ ಪಾಟೀಲರೇ ನೀವು ಹೇಳೋದ ಖರೆ, ಆದರೆ ಅನೇಕ ವರ್ಷಗಳಿಂದ ನಮ್ಮ ಜನರು ಹೇಲು ಹೊರತಾರೆ ನೀವು ಹೊರತ್ತೀರ ನಮ್ಮಲ್ಲಿಯೂ ಎಂ,ಎಲ್,ಎ. ಎಂ,ಪಿ. ಆಫೀಸರಗಳು ಆಗ್ಯಾರು ಅವರಿಗೆ ನಿಮ್ಮ ಹೆಣ್ಣು ಅಥವಾ ಗಂಡಾಗಲಿ ಕೊಡ್ತೀರಾ? ನಿಮಗ ಮೂಲವಾಗಿ ಮನಶ್ಯಾನ ಮನಿಶ್ಯಾ ಅಂತ ಗುರ್ತಿಸುವ ಯೋಗ್ಯತಾ ಇಲ್ಲ. ಸಮಾನತೆ ಬಗ್ಗೆ ಮಾತಾಡೋಕೆ ಏನ ಹಕ್ಕ ಐತಿ? ಎಂದಾಗ ಪಾಟೀಲ ಗಪ್ಪಾದನು. ಏಕೆಂದರೆ ಅವನಿಗೂ ಹೌದು ಸರಿಯಾದ ಮಾತು ಅನಿಸಿತು.

ಮಾದೇವನಿಗೆ ವಿರೋಧವಾಗಿ ಕಂಡುಬಂದ ಪುಣೆಕರನನ್ನು ಎದೆಗೆ ಒದ್ದು ಮಾತಾಡುವಷ್ಟು ಸಿಟ್ಟು ಬಂದರೂ ''ಇಲ್ರಿ ಸರ್ ಇಂದ ಸ್ವಲ್ಪ ಲೇಟಾಗೇತಿ ನಾಳಿಂದ ದೌಡ ಬರತೀನಿ (ಹೊ,ರಾ,ಪು. ೭) ಎಂದು ಚೆಂಬರಿನಿಂದ ಹೊರಬಂದನು. ನಾನು ರಾಜನಾಗಿದ್ದರೆ! ಆಗಿದ್ದರೇ? ಅನ್ನುದೇನು? ಆ ಸ್ವಾತಂತ್ರ್ಯ ಚಳುವಳಿ ಮತ್ತು ನನ್ನಪ್ಪನ್ನು ಸಾಯಿಸಿ ರಾಜ್ಯವನ್ನು ಕಬಳಿಸುವ ಪಿತೂರಿ ನಡೆಯದಿದ್ದರೆ ಈ ಲೋಕದ ಗಂಡ, ಪ್ರಚಂಡ, ರಾಜಾಧಿರಾಜ, ವೀರಾಧಿವೀರ ಮಾದವರಾವರಿಗೆ ಜಯವಾಗಲಿ'' ಎಂಬ ಹಾಡು ಹಾಡುತ್ತಿರಬೇಕಾದರೆ ಎಲ್ಲರೂ ಹಾಂ. ಹುಜೂರ, ಹೌದು ಹುಜೂರು ಎಂದು ತಲೆಹಾಕುವಂತಾಗುತ್ತಿತ್ತು. ಇಂಥವರನ್ನು ಹಿಡಿದು ಕುದುರೆ ಕಾಲಿಗೆ ಕಟ್ಟಿ ಎಳಿಸುತ್ತಿದ್ದೆ ಎಂದು ತನ್ನ ಮುಖದಲ್ಲಿಯೇ ಸಂತೋಷಪಟ್ಟನು.

ಇದು ಮಾದೇವನಿಗೆ ಎಲ್ಲಿ ಹೇಳಿಕೊಂಡರೂ ಪ್ರಯೋಜನವಿಲ್ಲ. ಮನಸ್ಸಿನಲ್ಲಿ ಅಂದುಕೊಂಡೇ ಆನಂದ ಪಡಬೇಕಷ್ಟೇ ಎಂಬ ವಿಚಾರದಲ್ಲಿದ್ದನು. ಆದರೂ ಅದರ ಹುಚ್ಚು ಬಿಟ್ಟಿರಲಿಲ್ಲ. ಅನೇಕ ದಿವಸಗಳಿಂದ ಹೇಳಬೇಕು ಅಂತ ಇದ್ದೆ ನೀನೊಬ್ಬನೇ ಸಿಕ್ಕಿದ್ದಿ ಅದಕ್ಕೆ ಹೇಳುವೆ, ನಾನು ಮಹಾರ ಅಲ್ಲ ಮರಾಠ ಇದ್ದೀನಿ. ನಾನು ಯಾವುದೇ ಮೀಟಿಂಗಗೆ ಬರಲ್ಲ ಎಂದು ಒಮ್ಮೆಲೆ ಕೊಲ್ಹಾರನಿಗೆ ಹೇಳಿದಾಗ ಅವನು ಆಶ್ಚರ್ಯಚಕಿತನಾಗಿ, ಹಿಂದೆಯೇ ಮಾದೇವ ಸುಮತಿಯನ್ನು ಬಿಟ್ಟು ತಿರಗಾಡಿದ್ದು ಗೊತ್ತಿತ್ತು. ಆದರೆ ಈ ಜಾತಿ ಮೂಲದಿಂದ ಅಂತ ಗೊತ್ತಿರಲಿಲ್ಲ. ಕೋಲ್ಹಾರನು ಮರಾಠರ ಹುಡುಗನಾದ ವಾಘಮೋರೆಗೆ ಇದೇ ವಾರ್ತೆ ತಿಳಿಸಿದನು. ವಾಘಮೋರೆ ತಾನು ಹಿರಿಯ ಶ್ರೇಷ್ಠ ಮೇಲಿನ ಕುಲದಲ್ಲಿ ಜನಿಸಿದ ವ್ಯಕ್ತಿ ಅಂತೇಳಿ ಬೋದನೆ ಮಾಡಿದನು. ಅದೇನೆಂದರೆ ಏ ಕೋಲ್ಹಾರ ಅವನಿಗೆ ಸರಿಯಾಗಿ ಹೇಳು. ಸದ್ಯ ಅವನು 'ಮಹಾರ' ಅಲ್ಲ 'ಮರಾಠ' ಅಂತೇಳಿ ಪುಣೇಕರ್‌ಗೆ ಏನಾದರೂ ಗೊತ್ತಾದರೇ ಕೂಡಲೇ ತೆಗೆದು ಹಾಕುವನು ಆಗ ಮಾದೇವ ಭಿಕ್ಷೆ ಬೇಡುವ ಪ್ರಸಂಗ ಬಂದೀತು ಎಂದು ಸಲಹೆನೀಡಿದನು.

ಯಾರು ಏನೇ ಹೇಳಿದರೂ ಮಾದೇವನು ಕೋಲ್ಹಾರ ನೇಮಾಡೆ ಸಹೋದ್ಯೋಗಿಗಳ ಸಂಗಡ ತಿರುಗಾಡುವುದನ್ನು ಕಡಿಮೆ ಮಾಡಿದನು. ಆಫೀಸ್‌ನಲ್ಲಿ ಕುಲಕರ್ಣಿ ಏನ್ರೀ ನೀವು ಮಹಾರ ಅಲ್ಲ ಅಂತೀರಿ ಹೆಸರು ಮಹಾರ ಪೈಕೀ ಅದಾ ನೀವು ಹೆಸರಾದರೂ ಬದಲಾಯಿಸಿ ಇಲ್ಲಾಂದ್ರ ಜಾತಿ ಆದ್ರ ಬದಲಾಯಿಸರಿ ಅಂತ ಹೇಳಿದರು. ಆಗ ಅವನ ತಲೆಯಲ್ಲಿ ಗುಂಗಿ ಹುಳ ಹೊಕ್ಕಂತಾಗಿ ಯಾವ ಹೆಸರು ಇಟ್ಟುಕೊಳ್ಳಬೇಕು ಎಂದು ಹಲವಾರು ಪ್ರೊಫೆಸರಗಳ ಬಳಿ ಕೇಳಿದ ಕೊನೆಗೆ ಕುಲಕರ್ಣಿಯವರೇ ಸುಲಭವಾಗಿ ಅಂಬೇಡ್ಕರ ಅವರ ಉದಾ: ಹೇಳಿ 'ಕುರುಂದವಾಡ್ಕರ್' ಅಂತ್ಹೇಳಿ ಇಟ್ಟುಕೊಳ್ಳಿರಿ ಎಂದನು ಅಂದು ಸಂಜೆಯೇ ಮಗಳು ಬರೆದ ಹೆಸರನ್ನು ತಿದ್ದಿ 'ಅಂಬಾಬಾಯಿ ಮಾಧವರಾವ್ ಗಾಯಕವಾಡ ಕುರುಂದವಾಡಕರ' ಎಂದು ತಾನೇ ಪುಸ್ತಕ ನೋಟ್‌ಬುಕ್‌ಗಳ ಮೇಲೆ ಬರೆದನು. ಇದಕ್ಕೆ ಹೆಂಡತಿ ನಿಮಗ ತಲಿ ಕೆಟ್ಟತಿ ಸಾಲಿಯೊಳಗ ಒಂದು ಇಲ್ಲಿ ಒಂದು ಹೆಸರಾ? ಎಂದು ತನ್ನೂರಿನ ಒಣಮುಕಳಿ ಸಾಹುಕಾರನ ಕಥೆಯನ್ನು ಮಾದೇವನಿಗೆ ಹೇಳಿ ಅದರಿಂದ ಬಿಟ್ಟುಬಿಡುತ್ತಾನೇನೋ ಅಂದುಕೊಂಡಳು ಆದರೂ ನಾನು ಅವನಂಗೆ ಊರಿಗೆ ಊಟ ಹಾಕಿಸಲ್ಲ ದಾಖಲಾತಿಗಳನ್ನು ಅಫಿಡವಿಟ ಮೂಲಕ ಬದಲಾವಣೆ ಮಾಡಿಸ್ತಿನಿ ಎಂದನು.

ಹಿಡಿದ ಕಾರ್ಯ ಮುಗಿಸಬೇಕು ಎಂಬಂತೆ ಮಾದೇವ ಸೀದಾ ಕುಲಕರ್ಣಿಯನ್ನು ಕ್ಯಾಂಟೀನಿಗೆ ಕರಕೊಂಡು ಹೋಗಿ ಪೂರಿಬಾಜಿ ತಿನ್ನಿಸಿದ ಏಕೆಂದರೆ ಅವನೇ ಕುರುಂಡವಾಡಕರ ಅಂತ ಹೆಸರು ಇಟ್ಟುಕೋ ಎಂದಿದ್ದು. ತಿಂದ ಮುಲಾಜಿಗೆ ಇತ್ತ ಕುಲಕರ್ಣಿ ''ಕಾಂಬಳೇ ಅಲ್ಲಲ್ಲ ಸಾರ್ರಿ ಕುರುಂದವಾಡಕರ ನೀವ ಏನ ಅನ್ರಿ ನೀವ ಮಾತ್ರ ಹೊಲೇರಂಗ ಕಾಣಿಸುದಿಲ್ರೆಪ್ಪ ಆ ಕೋಲ್ಹಾರನ ನೋಡ್ರಿ ಅವನ ಹಾವ ಭಾವ ಮಾತು ಕಲೆ ಸುದ್ದ ಹೊಲೇರಾಂಗ ಅಧ'' ಎಂದಾಗ ಮಾದೇವ ಉಬ್ಬಿದ ಪೂರಿಯಾದನು.

ಮಾದೇವನ ದಿನಂಪ್ರತಿ ಈ ವರ್ತನೆ ನೋಡಿ, ಕೇಳಿ, ಸಹಿಸಿ ಸಾಕಾಗಿ ಇದೆಲ್ಲಾ ಹುಚ್ಚುತನವೆನಿಸುತ್ತಿತ್ತು. ಆದರೂ ಆಂತರಿಕವಾಗಿ ಆಕೆಯೂ ಸಹಿತ ಬಹಳ ಕುಗ್ಗಿದ್ದಳು. ಏಕೆಂದರೆ ಅಂದು 'ತುಳಸಿ' 'ವಿಮಲಿ'ಯ ಗೊಡವೆಗೆ ಹೋಗದಿದ್ದರೆ ಇದ್ಯಾವುದು ಪರಿವೇ ಇರುತ್ತಿರಲಿಲ್ಲ. ತುಳಸಿ ವಿಮಲಿಯರ ಬೈಗುಳಗಳಿಂದ ಜನ್ಮರಹಸ್ಯ ಖಂಡೋಬನಿಂದ ವಿವರವಾಗಿ ಗೊತ್ತಾಗಿದ್ದು ಕನಸೇ ಎಂಬಂತೆ ಸುಮತಿಗೆ ಭಾಸವಾಗಿತ್ತು. ಅದನ್ನು ಸುಮತಿ ನೆನಸಿಕೊಂಡರೆ ಮೈ ಜಲ್ಲೆಂದು ಪುಟಿಯುತ್ತಿತ್ತಂತೆ ಆ ಇತಿಹಾಸ (ಕಥೆ) ಹೀಗಿದೆ.

ಜೂನ್ ೧೯೪೭ರ ಸಮಯ ಮಳೆ ಬಹಳ ಭಯಂಕರವಾಗಿ ಬರುತ್ತಾ ಇತ್ತು. ಒಂದ ಕ್ಷಣ ಸಣ್ಣಾಗಿ (ಹನಿಹನಿ) ಉದುರುತ್ತಿತ್ತು. ಹೊಲಗೇರಿಯಲ್ಲಿ ಇರುವ 'ಜಾನೂಬಾ' ಅವನ ಹೆಂಡತಿ 'ಹೀರಾಬಾಯಿ' ಇಬ್ಬರೂ ಈಗಾಗಲೇ ವೃದ್ಧಾವಸ್ಥೆಯಲ್ಲಿದ್ದರು. ಯಾವುದೇ ಮಕ್ಕಳಾಗಿರಲಿಲ್ಲ ಜೋರಾಗಿ ಮಳೆ ಬಂದ ಕಾರಣ ಕೇರಿಯ ಎಲ್ಲರೂ ತಮ್ಮ ಹರಕು ಮನೆಗಳಲ್ಲಿ ಇದ್ದರು. ಇತ್ತ ಜಾನೂಬಾ ಮನೆ ಮುಂದೆ ಕಟ್ಟೆಯ ಮೇಲೆ ಕೂತಿದ್ದ ಮನೆ ಕಡೆಗೆ ಯಾರೋ ಬಂದಂತಾಗಿ ಜಾನೂಬಾ ''ಸಾಯನಾಕಗೋಳ ಪರಶುರಾಮ ಇರಬೇಕು, ಭತ್ತದ ಹೊಲದಾಗಿನ ಕಸ ಕೀಳಾಕ ಕೆಲಸಕ್ಕ ಹೇಳಾಕ ಬರಾತಾನೇನೋ'' ಅಂದುಕೊಂಡರೆ ಅವನು ಕುರುಂದವಾಡದ ರಾಜನ 'ಕುಡಿ' (ಹಸುಗೂಸು)ಯನ್ನು ತಂದಿದ್ದ.

ಜಾನೂಬಾ ಹೆಂಡತಿಯನ್ನು ಕರೆದು ಕೂಸಿಗೆ ಹಾಲುಣಿಸಿ ಬೆಚ್ಚಗೆ ಮಾಡಿದ ನಂತರ ಬಂದ ವಿಷಯವನ್ನು ಕೇಳಿದಾಗ ನಾನಾಸಾಹೇಬನು ವಿವರವಾಗಿ ಹೇಳುವುದಕ್ಕಿಂತ ಮುಂಚೆ ''ಅದನ್ನ ಏನ ಹೇಳೂದು ದೊಡ್ಡ ಕಥಿಯ ಐತಿ'' ಎಂದು ಅವಸರದಿಂದ, ಆತಂಕದಿಂದ ಬಂದ ಜೀವ ಸಮಾಧಾನಿಸಿಕೊಂಡನು.

ಜಾನೂಬಾ ಇಲ್ಲರಿ ನೀವು ಮರಾಠ ಇದ್ರಿ ನಾವು ಹೊಲೇರು ಇದ್ದೀವಿರಿ ಅಂದರೂ, ಯಾರೇ ಆದರೂ ಏನಂತ? ಅಂದಾಗ ಜಾನೂಬಾ 'ಗಾಂಧಿ' 'ಬಸವಣ್ಣ' 'ಅಂಬೇಡ್ಕರ'ರನ್ನು ನೆನಪಿಸಿಕೊಂಡನು. 'ನಾನಾಸಾಹೇಬ' ರಾಜ್ಯದ ಆಪ್ತ ಸಹಾಯಕನಾಗಿದ್ದು, ಕುರುಂದವಾಡದ ಸಂಭಾಜಿರಾವ ಮತ್ತು ಅಣ್ಣ ಅಚ್ಯುತರಾವ ನಡುವೆ ಆಸ್ತಿಯ ನಿಮಿತ್ತವಾಗಿ ಯುದ್ಧ ಉಂಟಾಗಿ ಸಂಭಾಜಿರಾವ ಅಣ್ಣ ಮತ್ತು ಅತ್ತಿಗೆಯನ್ನು ಅಲ್ಲದೆ ಈ ಹಸುಗೂಸನ್ನು ಸಹಿತ ಸಾಯಿಸಲು ಯೋಚನೆಯಲ್ಲಿರಬೇಕಾದರೆ ನಾನು ಈ ಕಡೆ ಎತ್ತಿಕೊಂಡು ಬಂದಿದ್ದೇನೆ. ನಾನು ಮುಖ್ಯವಲ್ಲ ಈ ಕೂಸು ಮುಖ್ಯ ಅಂದನು. ಇಷ್ಟೆಲ್ಲಾ ಕೇಳಿದಂತಹ ಹೊಲಗೇರಿಯ ಜಾನೂಬಾ ಮತ್ತು ಹೀರಾಬಾಯಿಯವರ ಮನಸ್ಸಿಗೆ ಒಂದು ಕಡೆ ತಾಪ ಬಂದರೆ ಇನ್ನೊಂದೆಡೆ ಕೋಪ ಬರುವಂತಾಗಿತ್ತು. ''ಇಂಥಾ ಬಂಗಾರದಂತ ಕೂಸಿನಾ ಕೊಲ್ಲಾಕ ತಯಾರ ಅದಾನ ಅಂದ್ರ ಅಂವಾ ಎಂಥಾ ನೀಚ ಭಾಡ್ಯಾ ಇದ್ದಾನು'' ಎಂದು ಹೀರಾಬಾಯಿ ಪಿಸುಗುಟ್ಟಿದ್ದಳು.

ಮನಸ್ಸು ಕರಗಿದಂತಾಗಿ ಜಾನೂಬಾ ಮತ್ತು ಹೀರಾಬಾಯಿ ಹೌದು ಸರಿ. ನಾವು ಮರಾಠರಲ್ಲ ಕ್ಷತ್ರಿಯರಲ್ಲ ಹೊಲೆಯರು. ಆ ಹುಡುಗನ ಜಾತಿ ಕೆಡಿಸಿದಂಗೆ ಆಗುತ್ತದೆ ಎಂದಾಗ ನಾನಾಸಾಹೇಬ

ತುಂಬಿದ ಹೃದಯದಿಂದ, ನೋಡ್ರಿ ಇಲ್ಲಿ ಜಾತಿ ಮುಖ್ಯವಲ್ಲ ಜೀವ ಮುಖ್ಯ ಉದಾಹರಣೆಗೆ ಒಬ್ಬ ಬಂದು ನಿನಗೆ ಜಾತಿ ಮುಖ್ಯನೋ ಜೀವ ಮುಖ್ಯನೋ ಅಂದರೆ ಜಾತಿ ಯಾವನಿಗೆ ಬೇಕಾಗಿದೆ ಜೀವ (ಪ್ರಾಣ) ಉಳಿದರೆ ಸಾಕು ಅನ್ನುವನು. ಹಾಗೆಯೇ 'ಜಾತಿ' 'ಜಾತಿ' ಎಂದು ಏಕೆ ಯೋಚನೆ ಮಾಡ್ತಿರಿ. ಹೊಲೆಯರಲ್ಲಿಯೇ ಇರಲಿ, ಬೇರೆ 'ಮರಾಠ' ಅಂದರೆ ಅವನನ್ನು ಉಳಿಸುವುದಿಲ್ಲ ಎಂದು ಪರಿಪರಿಯಾಗಿ ಬೇಡಿಕೊಂಡನು.

ಮರುದಿವಸ ಬೆಳಿಗ್ಗೆ ನಸುಕಿನಲ್ಲಿ ಎದ್ದು ನಾನಾಸಾಹೇಬನು ಕೊನೆಯದಾಗಿ ಕೆನ್ನಗೆ ಮುತ್ತುಕೊಟ್ಟು ''ಜಾನೂಬಾ ಈಕೂಸು ನಿಮದಾ ಅಂತ ತಿಳ್ಕಳ್ರಿ'' ಹೀರಾಬಾಯಿ ಕಾಲಿಡಿದು ''ಈ ಕೂಸು ನಿನ್ನ ಹೊಟ್ಯಾಗ ಹುಟ್ಯೆತಿ ಅಂತ ತಿಳ್ಕೊ ಯವ್ವಾ'' ಎಂದು ಅಳಲಾರಂಭಿಸಿದ್ದನ್ನು ತಡೆದು ಒಪ್ಪಿಕೊಂಡರು. ಎಲ್ಲಕ್ಕಿಂತ ಮುಖ್ಯವಾಗಿ ಈ ಕೂಸು ಮರಾಠರದು, ಕುರುಂದವಾಡದ್ದು ಕ್ಷತ್ರಿಯರದ್ದು ಅಂತ ಯಾವತ್ತಿಗೂ ಯಾರಿಗೂ ಎಂತ ಸ್ಥಿತಿಯಲ್ಲಿಯೂ ಗೊತ್ತಾಗಬಾರದು. ನಾನು ನಾಲ್ಕು ತಿಂಗಳ ನಂತರ ಬರುವೆ ಎಂದು ಮಾನಸಿಕ ತಳಮಳದಿಂದ ಹೋದ.

ಅಂದು ಹೋದ ನಾನಾಸಾಹೇಬ ತಿರುಗಿ ಮುಖ ತೋರಿಸಲಿಲ್ಲ. ಅವನು ಇದ್ದರೆ ತಾನೇ ಬರುವುದು ಅವನನ್ನು ಸಂಭಾಜಿರಾವ ಸಾಯಿಸಿದ್ದ ಇತ್ತ ದಿನಗಳು ಕಳೆದಂತೆ ಜಾನೂಬಾ ಹೀರಾಬಾಯಿ ನಾನಾಸಾಹೇಬನನ್ನು ಮರತೇ ಬಿಟ್ಟರು. ಮಾದೇವನನ್ನು ಸ್ವಂತಮಗನನ್ನಾಗಿ ನೋಡಿಕೊಳ್ಳುತ್ತಿದ್ದರು. 'ಮಾದೇವ' ಎಂಬ ಹೆಸರು ಇಟ್ಟಿರುವುದೇ ಜಾನೂಬಾ ಹೀರಾಬಾಯಿ. ಮಾದೇವ ಕ್ಷತ್ರಿಯ ಅನ್ನುವುದು ಮಾತ್ರ ಅವರ ಮನಸ್ಸಿನಲ್ಲಿ ಆಗಾಗ ಸುಳಿದಾಡುತ್ತಿತ್ತು. ಮಗು ತಮ್ಮದೇ ಎನ್ನುವ ಹಾಗೆ ತಮ್ಮದೇ ಎಂದು ಹೇಳುವಂತಹ ಪ್ರೀತಿ ವಿಶ್ವಾಸ ನಂಬಿಕೆ ವಾತ್ಸಲ್ಯದಿಂದ ಇಟ್ಟುಕೊಂಡಿದ್ದರು. ಅದಕ್ಕೇನೂ ಗೊತ್ತಿರಲಿಲ್ಲ ಪಾಪ ಹಸುಗೂಸು ಅದು.

ಹೀರಾಬಾಯಿಗೆ ಮಕ್ಕಳು ಆಗಿರಲಿಲ್ಲವಾದ್ದರಿಂದ ಈ ಮಗುವಿನಿಂದ ಮನಸ್ಸು ಆನಂದಗೊಂಡು ''ಮಕ್ಕಳಿಲ್ಲದ್ದಕ್ಕಾಗಿ ದೇವ್ರು ಇದನ್ನ ನನ್ನ ಉಡ್ಯಾಗ ಹಾಕಿದ ತಿರಿಗಿ ಕಸಕೋಬ್ಯಾಡ'' ಎಂದು ಮೊರೆಯಿಡುತ್ತಿದ್ದಳು. ಇತ್ತ ಜಾನೂಬಾ ನಾನಾಸಾಹೇಬ ಕೊಟ್ಟ ಪೆಟ್ಟಿಗೆ ತೆಗೆದು ನೋಡಿದರೆ, ರಾಜಮುದ್ರೆಗಳು ಕಾಗದ ಪತ್ರಗಳು ಅಂತ ಗೊತ್ತಾಯಿತು ವಿನಃ ಅವು ಯಾರ ಹೆಸರಿನ ಮೇಲಿವೆ ಎಷ್ಟು ಆಸ್ತಿಯನ್ನು ತೂಗುತ್ತವೆ, ಇತ್ಯಾದಿ ವಿವರ ಗೊತ್ತಾಗಲಿಲ್ಲ. ಆದಕ್ಕೆ ಹಾಗೆಯೇ ಮುಚ್ಚಿಟ್ಟನು. ವಿದ್ಯೆಯೆಂಬುದು ಎಷ್ಟು ಅವಶ್ಯಕವೆಂಬುದು ಅನಿಸಿರಬೇಕು ಅದಕ್ಕೆ ಜಾನೂಬಾ ಮಗ ಮಾದೇವನನ್ನು ಶಾಲೆಗೆ ಸೇರಿಸಲು ಮುಂದಾದನು. ಅಷ್ಟೊತ್ತಿಗೆ ಸ್ವಾತಂತ್ರ್ಯ ಸಿಕ್ಕಿತ್ತು. ಶಾಲೆಯ ಮೇಷ್ಟ್ರು ''ಯಾರ ಈ ಹುಡುಗ'' ಎಂದಾಗ ಜಾನೂಬಾ ಹೆದರಿಕೆಯಿಂದ ''ನಂದರೀ ಯಪ್ಪಾ'' ಎಂದು ಆಂತರಿಕ ಹಿಂಜರಿಕೆಯಿಂದ ಅಂದನು. ''ಮಾದೇವ ಜಾನೂಬಾ ಕಾಂಬಳೆ'' ಎಂದು ಬರೆದಾಗ ಅವನ ಜಾತಿಯೆಂಬ ಶಿರೋನಾಮ ಉದಯಿಸಿತು.

ಮೊದಲೇ ಕ್ಷತ್ರಿಯ ಕುಡಿಯಾಗಿರುವ ಮಾದೇವನು ಬಹಳ ವೇಗವಾಗಿ ಓದು, ಬರೆ, ಪ್ರಶ್ನೆ ಹಾಕುವುದು ಹೀಗೆ ಎಲ್ಲಾ ರೀತಿಯಿಂದ ಜಾಣ್ಮೆಯನ್ನು ತೋರಿಸುತ್ತಿದ್ದರಿಂದ ತಂದೆ ತಾಯಿಗಳಿಗೆ ಒಳಗೊಳಗೆ ಅನುಮಾನ ಅಂದರೆ, ಇವನಿಗೆ ನಾನು ಹೊಲೆಯ ಅಲ್ಲ ಅಂತ ಗೊತ್ತಾದರೆ ಹೆಂಗೆ? ಎಂದು ಇಬ್ಬರೇ ಇರುವಾಗ ಮಾತಾಡುತ್ತಿದ್ದರು. ಜಾನೂಬಾ ಇಲ್ಲ ಬಿಡು, ಅವನು ನಾನು ಹೊಲೆಯ ಅಲ್ಲ ಅಂದರೂ ನಂಬುವವರು ಯಾರು? ಎಂಬ ಸಮರ್ಥನೆ ನೀಡುತ್ತಿದ್ದನು. ಮಾದೇವನು ಮೆಟ್ರಿಕ್ ಪಾಸಾಗಿ ಇನ್ನು ಕಾಲೇಜಿಗೆ ಹೋಗ್ತಿನಿ ಎಂದರೆ ಜಾನೂಬಾ ಮಗನೇ ನೀನೆಷ್ಟರ ಓದು ಯಾವುದನ್ನು ಬ್ಯಾಡ ಅನ್ನಲ್ಲ ಎಂದು ಮುದ್ದು ಮಾಡುತ್ತಿದ್ದನು. ಪಾಸಾಗಿದ್ದುದು ಇಡೀ ಹೊಲಗೇರಿಗೆನೇ ಮರ್ಯಾದೆ ತಂದಿತು. ಸೋದರ ಮಾವನಾದ 'ದಗಡು' ತುಂಬಾ ಖುಷಿಯಿಂದ ಬಂದೆ ಬಿಟ್ಟ. ಬಂದು ಶುಭಾಶಯ ತಿಳಿಸಿದನು. ಅದಕ್ಕಿಂತ ವಿಶೇಷವಾಗಿ ಮಗಳಾದ ಸುಮತಿಯನ್ನು ಅವನಿಗೆಯೇ ಕೊಡಬೇಕು ಅಂದುಕೊಂಡಿದ್ದನು. ಅವನ ತಂಗಿ ಹೀರಾಬಾಯಿಯದ್ದು ಅದೇ ಆಸೆ ಆಗಿತ್ತು. ಆದ್ದರಿಂದ ಮಾದೇವ ಇನ್ನು ಓದುತ್ತಿರುವಾಗಲೇ ಸುಮತಿಯನ್ನು ಕೊಟ್ಟು ಮದುವೆ ಮಾಡಿದರು. ಏಕೆಂದರೆ ''ಈಗೀಗ ಉತ್ತಮ ಹುಡಿಗೇರೆಲ್ಲಾ ಸಾಲೀ ಕಲಿತ ನಮ್ಮ ಜಾತಿ ಹುಡುಗೊರ್ನ ಮದ್ವಿ ಮಾಡ್ಕೊಳ್ಳಾಕತ್ಯಾರಂತ ಮಾದೂನ ಕಾಲೇಜಿಗೆ ಕಳಿಸೋದಾದರೆ ಸುಮೀನ ಕೊಟ್ಟ ಮದ್ವಿ ಮಾಡೇ ಶಾಲೆಗೆ ಕಳಿಸು'' ಎಂದು ದಿನಂಪ್ರತಿ ಜಾನೂಬಾನಿಗೆ ತಾಕೀತು ಮಾಡುತ್ತಿದ್ದಳು.

ಕಾಲೇಜನಲ್ಲಿ ಒಂದು ಹುಡಿಗಿ ಅನುಪ ದೇಶಪಾಂಡೆ ಮಾದೇವನಿಗೆ ನೀ ಎಸ್ಸಿಯಂವಾ ಏನು? ಅಂತ್ಹೇಳಿ ಮನಸ್ಸಿಗೆ ನೋವುಂಟು ಮಾಡಿದ್ದಳು. ಆದರೂ ಅವನು ಕಾಲೇಜಿಗೆ ಪ್ರಥಮ ಬಂದನು. ಆರ್.ಪಿ.ಡಿ. ಕಾಲೇಜಿಗೆ ಪ್ರಥಮ, ಇಡೀ ರಾಜ್ಯಕ್ಕೆ ೨ನೇ ರ್‍ಯಾಂಕ್‌ನಲ್ಲಿ ಪಾಸಾಗಿ ವಡಗಾಂವ ಹೊಲಗೇರಿಯ ತಂದೆ ತಾಯಿ ಬಂಧು ಬಳಗ ಸ್ನೇಹಿತರು ಮತ್ತು ಗುರುಗಳು (ಕಾಲೇಜಿನ) ಎಲ್ಲ ತುಂಬಾ ಗೌರವಪೂರ್ವಕವಾಗಿ ಕಾಣುವ ಶಕ್ತಿಯನ್ನು ಪ್ರದರ್ಶಿಸಿದನು.

ಕಾಲೇಜ ಆಡಳಿತ ಮಂಡಳಿ ಶ್ರೀಮಂತರ, ಮೇಲ್ವರ್ಗದವರ ಮಕ್ಕಳನ್ನೇ ಮುಂದೆ ತರುವ ಕಲ್ಪನೆಯಲ್ಲಿದ್ದರೂ ಕಾಂಬಳೆ ಮುಂದೆ ಬಂದನು. ಈ ಕಾಂಬಳೆ ಯಾರು ಅಂತನೇ ಮೊದಲು ಗೊತ್ತಿರಲಿಲ್ಲ. ಅವನ ವಿದ್ಯೆಯ ಸಾಮರ್ಥ್ಯದಿಂದ ಸನ್ಮಾನ ಪಡೆದುಕೊಳ್ಳುವಷ್ಟು ಪ್ರಮುಖನಾದನು. ಇವನಿಗೆ ಕಾಲೇಜಿನ ಸಂಸ್ಥೆಯೆದುರು ಸನ್ಮಾನ ಘೋಷಿಸಿದ್ದೂ ಒಂದು ಉಪಾಯದಿಂದ ಅಥವಾ ಒಂದು ಲಾಭಕ್ಕಾಗಿ. ಮಾದೇವನು ಹೊಲೆಯ ಇವನು ನಮ್ಮ ಕಾಲೇಜಿನಲ್ಲಿಯೇ ರ್‍ಯಾಂಕ್ ಬಂದಿದ್ದಾನೆ. ಇಂತಹ ಇನ್ನುಳಿದ ಎಲ್ಲಾ ಮಕ್ಕಳಿಗೂ ಆದರಣೀಯ ಸ್ವಾಗತವಿದೆ ಎಂದು ಹೇಳಿದರೆ, ಎಲ್ಲಾ ಎಸ್ಸಿ ಹುಡುಗರೆಲ್ಲಾ ಇಲ್ಲಿ ದಾಖಲೆ ಆಗುತ್ತಾರೆ. ಆಗ ನಮ್ಮ ಗುರುತ್ವ ಉಳಿತದೆ. ಇಲ್ಲದಿದ್ರೆ ಕೆಲಸ ಇಲ್ಲದವರಾಗಿ ಅಲೆಯಬೇಕಾಗುತ್ತದೆ ಎಂಬ ಉದ್ದೇಶ.

ಸುಮತಿಯನ್ನು ಮದುವೆಯಾದ ಮೇಲೆ ಸಂಪ್ರದಾಯದಂತೆ ವಧುವನ್ನು ತವರು ಮನೆಗೆ ಕಳಿಸಲಾಗಿರುತ್ತದೆ. ಪುನಃ ಗಂಡನ ಮನೆಗೆ ಬರಬೇಕಾದರೆ ಯಾರಾದರೂ ಹೋಗಿ ಕರಕೊಂಡು ಬರಬೇಕಾಗುತ್ತೆ, ಮಾದೇವ ಬರಲ್ಲ ಅಂದ ಕೂಡಲೇ ಸುಮತಿಯ ಮನಸ್ಸಿನಲ್ಲಿ ಕೊರಗು ಮೂಡಿ ಬಾಹ್ಯದಲ್ಲಿ ಗೋಚರಿಸುತ್ತಿತ್ತು. ಅತ್ತೆಯಾದ ಹೀರಾಬಾಯಿಯೇ ಹೋಗಿ ಕರಕಂಡು ಬಂದಳು. ಸುಮತಿಯ ತಾಯಿ ಬಹಳ ನೋವಿನಿಂದ ಅಳುತ್ತಿದ್ದಳು. ಕೇರಿಯ ಹಿರಿಯ ಹೆಂಗಸರು ಗಂಡಸರು ''ಇಕ್ಯಾನಪ್ಪಾ ಶ್ಯಾಣ ಹೆಂಗಸನಬೇಕೋ ಹುಚ್ಚ ಅನ್ನಬೇಕೋ ಮಗಳ ಗಂಡನ ಮನೆಗೆ ನಂದೋಸಾಕ ಹೊಂಟಾಳು ಅಂದ್ರ ಅಳುತಾರೇನು ಎಂದು ಬಸ್ತವಾಡದ ಬಸ್‌ಸ್ಟ್ಯಾಂಡಿನಲ್ಲಿ ಸಮಾಧಾನ ಮಾಡುತ್ತಿದ್ದರು.

ಕಾದಂಬರಿಯಲ್ಲಿ ಗಂಡ ಹೆಂಡತಿಯ ನಡುವೆ ಇರುವ ಪ್ರೀತಿಯ ಅಪ್ಪುಗೆಯ ಅನುಬಂಧ ಸುಮಧುರವಾಗಿದೆ. ಕರೆಪ್ಪಜ್ಜ ಇವರ ಒಡನಾಟ ಕಂಡು ಅಕ್ಕರೆಯಿಂದ ಅಣಕಿಸುತ್ತಿದ್ದನು. ಅದಕ್ಕೆ ಮಾದೇವ ಕರೆಪ್ಪನ ಹಿಂದಿನ ಕಥೆಯನ್ನು ಎತ್ತಿ ಸಮಧಾನಗೊಂಡ. ಇತ್ತ ಸುಮತಿಯು ಮರೆತ ಪ್ರಪಂಚವನ್ನು ಮಾದೇವನಿಗೆ ನೆನಪಿಸಿ ಮನೆಯಲ್ಲಿ ತಿನ್ನಲಿಕ್ಕೆ ಏನೂ ಇಲ್ಲ ಅಂದರೂ ನಾನೇನು ಮಾಡಲಿ ಅಂತ ಹಾಸಿಗೆಯೇ ಸ್ವರ್ಗವೆಂದು ಭಾವಿಸಿದ್ದನು. ಏ ನನಗೇಕೆ ಹೇಳ್ತಿ ಬಾಬಾಗ (ಜಾನೂಬ) ಹೇಳು ಎನ್ನುತ್ತಿದ್ದನು. ಹೊಸ ಮದುವೆ ಹೊಸ ಹೆಂಡತಿ ಹೊಸ ಅನುಭವ ಆಗಿರುವುದರಿಂದ ಸಹಜವಾಗಿ ಎಲ್ಲವನ್ನು ಮರೆಯುವ ಸಾಧ್ಯತೆಗಳು ಇರಬಹುದು.

ಆರ್.ಪಿ.ಡಿ ಕಾಲೇಜಿನ ಸಂಸ್ಥೆಯವರು ಕಾಂಬಳೆಗೆ ರ್‍ಯಾಂಕ ಬಂದ ನಿಮಿತ್ತವಾಗಿ ನಮ್ಮ ಹುಡುಗೂರು ಯಾಕ ಮುಂದೆ ಬರಲ್ಲ. ದನಾಕಾಯು ಮಂದಿ ರ್‍ಯಾಕ್ ಬರ್‍ತಾರ ಅನ್ನುತ್ತಿದ್ದರು. ಇದು ಮನುಷ್ಯನ ಸಹಜ ಗುಣ ಯಾರೇ ಆಗಿರಲಿ ಸ್ವಲ್ಪಾದರೂ ಜಾತಿಯ ಅಭಿಮಾನ ಇದ್ದೇ ಇರುತ್ತದೆ. ಅಷ್ಟಕ್ಕೆ ಮಾದೇವ 'ಮಿ ಚಲತೋ ಸರ' ಎಂದು ಕುರ್ಚಿಯಿಂದೆದ್ದವನು ಹೋಗಿಯೇ ಬಿಟ್ಟನು. ಇತ್ತ ಪ್ರಿನ್ಸಿಪಾಲ ಮತ್ತು ಅಧ್ಯಕ್ಷರು ಅಧ್ಯಾಪಕರು ಬಹಳ ದೀರ್ಘವಾಗಿ ಕಾಲೇಜಿನ ಭವಿಷ್ಯತ್ತಿನ ಕುರಿತಾಗಿ ಸಮಾಲೋಚನೆ ಮಾಡಿದರು. ನಾವೇನರ ನಮ್ಮ ಕಾಲೇಜಿನ ಎಸ್ಸಿ ಹುಡುಗ ರ್‍ಯಾಂಕ್ ಬಂದೈತೆಂತ ಪ್ರಚಾರ ಮಾಡಿದರ ಆ ಹುಡಗ್ರೆಲ್ಲಾ ನಮ್ಮ ಕಾಲೇಜಿಗೆ ಬರಬಹುದು ನಮಗ ಸರ್ಕಾರದಿಂದ ಫೀಸು ಅಂತೂ ಬರತೈತಿ. ನಮಗೂ ಇನ್ನು ಫಾಯದಾನ ಅದ ಲುಕ್ಸಾನಂತೂ ಇಲ್ಲ ಹ್ಯಾಂಗ ಮಾಡ್ತಿರೋ ನೋಡ್ರಿ. ಎಲ್ಲಾ ನಿಮ್ಮ ಮ್ಯಾಗ ಅದ ಎಂದು ಪ್ರಿನ್ಸಿಪಾಲರು ಅಧ್ಯಕ್ಷರಿಗೆ ಹೇಳಿ ತಮ್ಮ ಬಾರವನ್ನು ಇಳಿಸಿಕೊಂಡರು.

ಅಧ್ಯಕ್ಷರು ನಾವು ಎಸ್ಸಿ ಜನರನ್ನು ಓದಿಸಿದರೆ ಮುಂದೆ ನಮ್ಮ ಜನಾಂಗದ ಗತಿ ಏನು? ಎಂಬ ಯೋಚನೆಯಲ್ಲಿದ್ದರು. ಪಾರ್ಟಟೈಂ ಪ್ರೊಫೆಸರ್ ವಾಂಖೇಡೆ ಅವರು ಚೇರ್ಮನ್ ಸಾಹೇಬರ ನೀವು ತಪ್ಪಾಗಿ ತಿಳ್ಕೊಂಡಾಂಗ ಕಾಣಸ್ತದ. ನಮ್ಮ ಜನಾಂಗಕ್ಕೆ ದಲಿತರಿಂದ ಸ್ಪರ್ಧೆ ಇಲ್ಲ ಲಿಂಗಾಯತ, ಮರಾಠ ಮತ್ತು ರೆಡ್ಡಿಗಳಿಂದ ಆಗಿದೆ. ಇವರೆಲ್ಲರೂ ಒಂದೊಂದು ರಾಜ್ಯ ತುಂಬಾನೇ ಇದ್ದಾರೆ. ಎಸ್ಸಿ ಹುಡುಗರು ಎಲ್ಲಾದರೂ ಓದಬಹುದು. ಎಲ್ಲಿ ಓದಿದರೂ ಅವರಿಗೆ ಸರ್ಕಾರ ವಿದ್ಯಾರ್ಥಿ ವೇತನ ಮಂಜೂರು

ಮಾಡುತ್ತೆ ಅದಕ್ಕೆ ಆ ಹುಡುಗುರು ಬರದಿದ್ದರೆ ವರ್ಕಲೋಡ ಕಡಿಮೆ ಆಗಿ ಸ್ಟಾಫಗೆ ತೊಂದರೆಯಾಗುತ್ತದೆ. ಹಾಂಗ್ ಮಾಡ್ತಿರೋ ಮಾಡ್ರಿ ಎಂದು ವಿನಯಪೂರ್ವಕವಾಗಿ ಹೇಳಿದರು. ಹೌದು ಇದನ್ನು ಸತ್ಯವಾದ ಸಂಗತಿಯೆಂದು ಹೇಳಬಹುದು. ಸಂವಿಧಾನಿಕವಾಗಿ ಸಮಾನತೆಯನ್ನು ಕಾಣಬೇಕಾಗಿರುವುದರಿಂದ ಮತ್ತು ಯಾವುದೇ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬರಬಾರದೆಂಬುದು ಕಡ್ಡಾಯವಾಗಿರುವುದರಿಂದ ಯಾರು ಎಲ್ಲಿಯಾದರೂ ಅಭ್ಯಾಸ ಮಾಡಬಹುದು.

ಅಂತು ಇಂತು ಯೋಚನೆ ಮಾಡಿ, ಮೇಲಾಗಿ ತನ್ನ ಅಳಿಯ ಟೆಂಪರರಿ ಕೆಲಸ ಮಾಡುತ್ತಿದ್ದರಿಂದ ಆಯ್ತು ಎಂದು ಅಧ್ಯಕ್ಷರು ಒಪ್ಪಿಕೊಂಡು ಮೀಟಿಂಗಗೆ ಬರಖಾಸ್ತ (ಸಮಾಪ್ತಿ) ಮಾಡಿದರು. ಕಾಲೇಜಿಗೆ ರ‍್ಯಾಂಕ್ ಬಂದ ಮಾದೇವನ ಸನ್ಮಾನ ಕಾರ್ಯದ ಸಲುವಾಗಿ ಕ್ಲಾರ್ಕ್ ಗೊಲ್ಪೆ ಬಂದು ಕಾಂಬಳೆ ಮನೆ ಯಾವುದು ಎಂದು ಕೇಳಿದನು. ಆಗ ವಿಷಯತಿಳಿದ ಎಲ್ಲಾ ಸಂಬಂಧಿಕರು ತಂದೆ ತಾಯಿ ಹಿರಿಯ ಕಿರಿಯರು ವಿಶೇಷವಾಗಿ ಹೆಂಡತಿ (ಸುಮತಿಗೆ) ಎಲ್ಲಿಲ್ಲದ ಸಂತೋಷವಾಯ್ತು. ಮಾದೇವನಿಗೆ ಸನ್ಮಾನ ಸ್ವೀಕರಿಸಲು, ಬಟ್ಟೆಗಳನ್ನು ತೊಳೆದು ಇಸ್ತ್ರಿ ಮಾಡಿ ಸುಂದರವಾಗಿ ಕಾಣುವಂತೆ ತಯಾರು ಮಾಡಿದರು. 'ಆನಂದ' ಸಂಬಂಧಿಕರಿಗೆ ಅಷ್ಟೇ ಅಲ್ಲ ಇಡೀ ಸಮುದಾಯಕ್ಕೆ ಆಗಿತ್ತು.

ಮಾದೇವ ಕಾಲೇಜಿನವರೆಗೆ ನಡೆದುಕೊಂಡೆ ಹೋಗಿ ನಾ ಬಂದೀನ್ರಿ ಸರ್ ಎಂದು ಪ್ರಿನ್ಸಿಪಾಲರಿಗೆ ಭೆಟ್ಟಿಯಾದನು. ಸನ್ಮಾನ ಸಮಾರಂಭ ಎರಡು ಗಂಟೆಗೆ ಪ್ರಾರಂಭವಾಯ್ತು. ವೇದಿಕೆಗೆ ಬರಮಾಡಿಕೊಳ್ಳುವಂತವರೆಲ್ಲಾ ಬಂದು ವೇದಿಕೆಯನ್ನು ಅಲಂಕರಿಸಿದ್ದರು. ಆದರೆ ಮುಖ್ಯವಾಗಿ ಮಾದೇವನನ್ನೇ ಕರೆದಿರಲಿಲ್ಲ. ಅವರು ಮರೆತುಬಿಟ್ಟಿದ್ದರು. ಆ ಮೇಲೆ ಕರೆಯಿಸಿ ಕಡೆಯಲ್ಲಿ ಕುರ್ಚಿ ಹಾಕಿ ಕೂಡ್ರಿಸಿದರು. ಕಾರ್ಯಕ್ರಮದಲ್ಲಿ ಮಾದೇವನಿಂದ ಕೆಲವು ಮಾತು, ಅಧ್ಯಕ್ಷ ನುಡಿ ಹೀಗೆ 'ಸನ್ಮಾನ ಕಾರ್ಯಕ್ರಮ'ದ ಜೊತೆಗೆ ಕಾಲೇಜಿನ ಪ್ರಚಾರಕಾರ್ಯ ಕೂಡ ಆಯ್ತು. ಕಾಲೇಜಿಗೆ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು.

ಸನ್ಮಾನದಿಂದ ಏಳು ನೂರು ಬಹುಮಾನ ಸಿಕ್ಕ ಕೂಡಲೇ ಮಾದೇವನು ಹೆಂಡತಿ ಸುಮತಿಯನ್ನು ಕರಕೊಂಡು ಸೈಕಲ್ಲಿನ ಮೇಲೆ ಕಡೆ ಬಜಾರಕ್ಕೆ ಬಂದು ಶಿಸ್ತಾಗಿ ಟೀ ಕುಡಿದು, ಬಟ್ಟೆಕೊಳ್ಳಲು ಹೋದರು. ಸುಮತಿಗೆ, ತಾಯಿ ಹೀರಾಬಾಯಿಗೆ, ತಂದೆ ಜಾನೂಬಾಗೆ ಖರೀದಿಸಿದನು. ನಂತರ 'ನಡೆ' ಅಂದಾಗ ಎಷ್ಟಾದರೂ ಗಂಡಹೆಂಡತಿ ಬಾಂಧವ್ಯ ಬಂಧನ ಎಣಿಸಲಾರದಷ್ಟು ಶ್ರೇಷ್ಠವಾದ್ದು ಎಂದೆನ್ನಬಹುದು. ಸುಮತಿ ನೋಡ್ರಿ ನಮಗಷ್ಟೇ ಕೊಡಿಸುವುದು ಸರಿಯಲ್ಲ ನೀವು ತಗೊಳ್ರಿ ಎಂದಳು. ಮಾದೇವ ಬೇಡ ನನಗೆ ಎರಡು ಜೊತೆ ಇದ್ದಾವೆ. ಅಂದಕೂಡಲೇ ಇಲ್ಲ ನನಗೂ ಎರಡು ಜೊತೆ ಸೀರೆ ಇದ್ದಾವೆ. ನಿನಗೆ ಬ್ಯಾಡ ಅಂದ್ರ ನನಗೂ ಬ್ಯಾಡ ಅಂದಳು. ಹೆಂಡತಿಯ ಪ್ರೀತಿಯ ಮಾತಿಗೆ ತಗೊಂಡು ಮನೆಗೆ ಮರಳಿದರು. ಇತ್ತ ತಂದೆ ಜಾನೂಬಾ ಸ್ವಲ್ಪ ಒದರಾಡಿದನು. ಏ ಹೀರಾ ನೋಡು ನಿನ್ನ ಮಗ ಹಿರೇತನ

ಮಾಡುತ್ತಿದ್ದಾನೆ. ಅದಕ್ಕೆ ಹಿರಾಬಾಯಿ  ಮಾಡಲಿ ನಿನಗೆ ವಯಸ್ಸಾಗೇತಿ ಇನ್ನ ನೀನೇ ಮಾಡ್ತೀಯಾ? ಅಂದಾಗ ಸುಮ್ಮನಾದನು. ರಾತ್ರಿ ಊಟವಾದ ಮೇಲೆ ಮಾದೇವನು ಉಳಿದ ಐನೂರು ರೂಪಾಯಿಗಳನ್ನು ಜಾನೂಬಾನಿಗೆ ನೀಡಲು ಹೋದರೆ, ಬ್ಯಾಡಾ ನಿನಗ ಬೇಕಂದ್ರ ಈಗ ತಗೋ ಖರ್ಚಿಗಿ ಎಂದನು. ಮಾದೇವನು ಇಲ್ಲ ನನ್ನ ಹತ್ತಿರ ಇನ್ನು ೫೦ ರೂ ಇದೆ. ನೀನೇ ಇಟ್ಟುಗೋ ಅಂದನು. ಅವನು ಸೀದಾ ಹೋಗಿ ಎಮ್ಮೆಯನ್ನು ತಂದನು ಹೀರಾಬಾಯಿ ಪ್ರಶ್ನಿಸಿದಳು. ಯಾಕೆ ತಂದಿ? ಅದಕ್ಕೆ ಜಾನೂಬಾ ಇರಲಿ, ಅದರ ಹೊಟ್ಟಿಗೆ ಹಾಕಿದರೆ ನಮ್ಮ ಹೊಟ್ಟಿಗೆ ಆದಾರ ಆಗುತ್ತೆ ಎಂದು ಸಮಾದಾನ ಹೇಳಿದನು.

ಮಾದೇವನಿಗೆ ಪಿ.ಯುಗಿಂತ ಬಿ.ಎಸ್ಸಿ. ಅಧ್ಯಯನ ಮಾಡುವುದು ಸ್ವಲ್ಪ ಕಷ್ಟ ಅನಿಸಿತು. ಆದರೂ ಅವನು ಕಾಲೇಜಿಗೆ ಹೋಗಿ  ಸಂಜೆ ಎಮ್ಮೆಯನ್ನು ಮೇಯಿಸುತ್ತಿದ್ದನು. ತಾಯಿ ಹಾಲು ಕರೆದು ಮಾರುತ್ತಿದ್ದಳು. ತಂದೆ ತಾಯಿಗಳಿಗೆ ಮಾದೇವ ಎಮ್ಮೆಕಾಯುವುದನ್ನು ನೋಡಿ ಆಳಬೇಕಾದವನು ಎಮ್ಮೆ ಕಾಯುವ ಸ್ಥಿತಿ ಬಂತಲ್ಲಾ ಅಂತೇಳಿ ಅವನ ನಶೀಬು ಹಂಗ ಐತಿ ಎಂದು ನಿಟ್ಟುಸಿರು ಬಿಡುತ್ತಿದ್ದರು. ಒಂದು ವೇಳೆ ಅವನ ಜಾತಿಯನ್ನು ಅವರು ಗೊತ್ತು ಮಾಡಿದ್ದರೆ, ಅವನು ರಾಜ ಆಗದೇ ಜೀವಾನೇ ಕಳೆದುಕೊಳ್ಳುವ ಪ್ರಸಂಗ ಇರುವುದರಿಂದಲೇ ಅವನು ಎಮ್ಮೆ ಕಾದರೂ ಜೀವಂತವಾಗಿ ಉಳಿಯಲು ಕಾರಣವಾಯ್ತು.

ಹೀಗೆ ಜಾನೂಬಾ, ಹೀರಾಬಾಯಿ, ಮಾದೇವ, ಸುಮತಿ ಒಟ್ಟಾಗಿ ಇದ್ದುಕೊಂಡು ಜೀವನ ಸಾಗಿಸಬೇಕಾದರೆ ಇದ್ದಕ್ಕಿದ್ದಂತೆ ಜಾನೂಬಾನಿಗೆ ಜ್ವರ ಬಂದು ಹಾಸಿಗೆ ಹಿಡಿದ. ಇತ್ತ ಮಾದೇವ ಕಾಲೇಜಿಗೆ ತಯಾರಾಗಿ ಹೋಗುವುದನ್ನು ಕಂಡು ಸುಮತಿ ''ಏನ್ರಿ ಬರೀ ಕಾಲೇಜ ಕಾಲೇಜ ಅಂತ ಬಡಕೊಳ್ರಿ ಇಲ್ಲಿ ಮಾವ ಅರಾಮಿಲ್ಲದೇ ಹಾಸಿಗೆ ಹಿಡಿದಿದ್ದಾನೆ'' ಅಂದಾಗ ಮಾದೇವನು ಒಳ್ಳೆಯ ಡಾಕ್ಟರ್‌ಗೆ ತೋರಿಸಿದನು. ವೈದ್ಯರು ಆರಾಮಾಗುತ್ತೇ ಒಂದು ವೇಳೆ ಆಗಲಿಲ್ಲಂದ್ರೆ ಪುನಃ ಬರ್‍ರಿ ಎಂದನು. ತರುವಾಯ ಜಾನೂಬಾನಿಗೆ ಕಡಿಮೆ ಅಲ್ಲ ಜಾಸ್ತಿಯೇ ಆಯ್ತು. ಆಗ ಮಾದೇವ ಅವಸರದಲ್ಲಿ ರಾತ್ರಿಯೇ ವೈದ್ಯನ ಹತ್ತಿರ ಹೋಗೋಣ ನಡೀರಿ ಎಂದು ತಯ್ಯಾರಾಗುದರಲ್ಲಿ ಗೆಳೆಯ ರಾವಶ್ಯ ಬಂದು ಇಲ್ಲ, ರಾತ್ರಿ ಹೊತ್ತು ಡಾಕ್ಟರ ಇರಲ್ಲ. ಇವತ್ತು ಒಂದು ದಿನ ಮನೆಯಲ್ಲೇ ಜೋಪಾನ ಮಾಡೋಣ ನಾಳೆ ಬೆಳಿಗ್ಗೆ ೮ ಗಂಟೆಗೆ ಒಯ್ಯೋಣ ಎಂದು ಸಲಹೆ ನೀಡಿದನು.

ಬೆಳಿಗ್ಗೆ ಒಯ್ದು ತೋರಿಸಿ ಅಸ್ಪತ್ರೆಯಲ್ಲಿ ಅಡ್ಮಿಟ್ ಮಾಡಿದರು. ಆಗ ಜಾನೂಬಾ ಮಗನಿಗೆ ನಿನ್ನ ತಾಯಿ, ನಿನ್ನ ಹೆಂಡತಿಯನ್ನು ಚೆನ್ನಾಗಿ ನೋಡ್ಕೋತಿಯಾ? ಮಾತು ಕೊಡು ಎಂದ ಅದಕ್ಕೆ ಮಾದೇವ ಏನಪ್ಪಾ ಹಾಗೆಲ್ಲಾ ಅನ್ನಬಾರದು ಎಂದು ತುಂಬಿದ ದುಃಖದಿಂದ ಹೂಂ ಅಂದನು. ಮತ್ತು ಅದೆಲ್ಲಾ ಬಿಟ್ಟು ಸುಮ್ಮನೇ ಮಲುಗು ಯಾವುದೇ ಯೋಚನೆ ಬೇಡ ಎಂದು ಹೇಳಿ ಎಲ್ಲರೂ ನಿದ್ದೆಗೆ ಜಾರಿದ್ದರು. ತಿರುಗಿ ಬೆಳಗಾಗುವುದರಲ್ಲಿಯೇ ಜಾನೂಬಾನ ಪ್ರಾಣ ಪಕ್ಷಿ ಹಾರಿ ಹೋಗಿತ್ತು. ಈ ವಾರ್ತೆ ತಿಳಿದ ಹೀರಾಬಾಯಿ, ಸುಮತಿ, ಮಗ ಮಾದೇವ ಗ್ರಹಣ ಬಡಿದವರಂತೆ ಮೂಕರಾದರು. ಹಿರಿಕಿರಿಯರು

ಹೀರಾಬಾಯಿ ಮಾದೇವನಿಗೆ ಸುಮ್ಮನಿರಲು ಹೇಳಿದರು ''ಏ ಹುಡುಗಾ ಮನೀಗಿ ಹಿರ್‍ಯಾ ನೀನ ಅದಿ ನೀ ಹಿಂಗ ಅಳಕೊಂತ ಕುಂತರ ಆ ಮುದುಕಿ ಮತ್ತು ಹುಡಿಗಿ ಹೆಂಗ್ ಮಾಡಬೇಕು ಮೇಲಾಗಿ ಬುದ್ಧಿ ತಿಳಿದಾವ ಓದಿದವ ನೀನು ಸಮಾಧಾನ ಹೇಳಬೇಕಪ್ಪ'' ಎಂದು ಬುದ್ಧಿವಾದ ಹೇಳಿ ಬೀಡಿ ಗೀಡಿ ಸೇದಿ ಹೋದರು.

ಮಾದೇವನಿಗೆ ಈ ಮೊದಲೇ ಜಾನೂಬಾ ಹೇಳಿದ ಮಾತು ನೆನಪಾಗಿ ಸುಮ್ಮನಾದನೇನೋ ಪಾಪ. ಅತ್ಯಂತ ಪ್ರೀತಿಯಿಂದ ಸಾಕಿದ ತಂದೆಯನ್ನೂ ಕಳೆದುಕೊಂಡ ಮಾದೇವನಿಗೆ ಎಲ್ಲಿಲ್ಲದ ದುಃಖ ಉಲ್ಬಣಿಸಿ ಬಂದರೂ ಅನಿವಾರ್ಯವಾಗಿ ಬಿಗಿಹಿಡಿದುಕೊಂಡು ತಾಯಿಯನ್ನು ಸಂತೈಸಿದನು. ಆಕೆಯು ಸಹ ಹೃದಯದಲ್ಲಿ ಇಟ್ಟುಕೊಂಡಿರುವ ಗಂಡನೇ ಹೋದಾಗ ನನಗೆ ಯಾರೂ ಬೇಡ. ನಿನ್ನ ಕಳೆದುಕೊಂಡ ಮೇಲೆ ನನಗೇನು? ನನಗ್ಯಾರು ಇದ್ದಾರೆ ಎಂದು ಅಳುತ್ತಿದ್ದಳು. ಶವಸಂಸ್ಕಾರ ಮಾಡಿ ಗೋರಿಯ ಮೇಲೆ ತಿನ್ನುವಪದಾರ್ಥ ಇಟ್ಟು ಸುಮತಿ ಗಂಡನನ್ನು ಅತ್ತೆಯನ್ನು ನೋಡ್ಕೊತಿನಿ ಅಂದಾಗ ಕಾಗೆಗಳು ಸುಳಿಯಲಿಲ್ಲ. ನಂತರ ಖಂಡೋಬನಿಗೆ ನೆನಪಾಗಿ ''ಏ ಮಾದು ಹೀರನ್ನ ಸುಮೀನ್ನ ಚೆಂದಾಗಿ ನೋಡ್ಕೊತೀನಿ ಅಂತ ಬೇಡಕೋ'' ಎಂದನು. ಅವನೂ ಅದರಂತೆ ಪುನರುಚ್ಚಾರ ಮಾಡಿದ ಕೂಡಲೇ ಕಾಗೆಗಳು ಒಂದು ಅಗುಳನ್ನು ಉಳಿಸದೇ ಎಲ್ಲವನ್ನು ತಿಂದುಬಿಟ್ಟವು.

ತರುವಾಯ ಹೀರಾಬಾಯಿ ಊಟ ಮಾಡದೇ ಅದೇ ಚಿಂತೆಯಲ್ಲಿರಬೇಕಾದರೆ ಮಗ ಮಾದೇವ ''ಯವ್ವನೀ ಹಿಂಗ ಮಾಡಿದರ ನಾ ಕಾಲೇಜಕ್ಕ ಹೋಗಲ್ಲ'' ಅಂದಾಗ ಆಕೆ ಯಥಾಸ್ಥಿತಿಗೆ ಬಂದಳು. ಆದರೆ ಕುಟುಂಬದಲ್ಲಿ ಆರ್ಥಿಕವಾಗಿ ತೊಂದರೆ ಆದಂತೆ ಮಾದೇವನು ಕೆಲಸಕ್ಕೆ ಹೋಗಲು ಪ್ರಾರಂಭಿಸಿದ. ಸುಮತಿ ಬ್ಯಾಡ್ರಿ ನೀವು ಕೆಲಸಕ್ಕೆ ಹೋದರೆ ಹೆಂಗೆ ನಾನೇ ಹೋಗ್ತೀನಿ ಅಂದಳು. ಮಾದೇವನು ಇಲ್ಲಾ ನೀನು ಹೋಗಬಾರದು ಜನ ಸರಿಯಿಲ್ಲ. ಮುಳುಗುತ್ತಿದ್ದವನಿಗೆ ಕಡ್ಡಿಯೇ ಆಸರೇ ಎಂಬಂತೆ ಎಸ್.ಎಸ್.ಎಲ್.ಸಿ. ಇಂಟರ್ ಪರೀಕ್ಷೆ ಅಂಕಗಳಿಂದ ಅಂಚೆ ಮತ್ತು ತಂತಿ ಇಲಾಖೆಯಲ್ಲಿ ನೇಮಕಾತಿ ಆಗಿ ಆರ್ಡರ್ ಬಂತು, ಇದರಿಂದ ತಾಯಿ ಮತ್ತು ಹೆಂಡತಿ ಬಹಳ ಖುಷಿಯಾದರು. ಇನ್ನೊಂದು ಕಡೆ ಯೋಚನೆ ಉಂಟಾಯಿತು ಏನೆಂದರೆ ನೌಕರಿಯ ನಿಮಿತ್ತವಾಗಿ ಟ್ರೇನಿಂಗ್‌ಗೆ ಹೋಗಲು ದುಡ್ಡು ಬೇಕಾಗಿರುತ್ತದೆ. ಅದಕ್ಕೆ ಅದೇ ಎಮ್ಮೆ ಮಾರಬೇಕು ಮೇಲಾಗಿ ಅದನ್ನು ಸಾಕಲು ಯಾರೂ ಇರಲಿಲ್ಲ. ಆಗ ತಾಯಿ ತನ್ನ ಅಣ್ಣನಾದ 'ದಗಡು' ನನ್ನು ಕರೆಯಿಸಿ ಎಮ್ಮೆಯನ್ನು ಮಾರಲು ಹೇಳಿದಳು.

ಅಂತೂ ಇಂತೂ ಮಾದೇವನು ನೌಕರಿಯ ತರಬೇತಿಗೆ ಹೊರಟ ಈ ಕಡೆ ತಾಯಿ ಮತ್ತು ಹೆಂಡತಿ ಕಂಡ ಕಂಡ ದೇವರು, ದೇವತೆಗಳಿಗೆ ಮಕ್ಕಳ ಸಂತಾನ ಸಲುವಾಗಿ ಬೇಡಿಕೊಂಡರು. ಹರಕೆ ಹೊತ್ತು ಬೇಡಿಕೊಳ್ಳುತ್ತಿದ್ದರು. ಕೇರಿಯಲ್ಲಿ ಯಾರಾದರೂ ಕೊರವಂಜಿಗಳು, ಸುಡುಗಾಡ ಸಿದ್ಧರು, ಕುರ್ ಮಾಮಗಳು ಬಂದರೆ ತಾಯಿ ಹೀರಾಬಾಯಿ ''ನಾ ಎಂದ ಮೊಮ್ಮಕ್ಕಳ ಎತಕೊಂಡ ಆಡಸ್ತೀನಿ ಹೇಳ್ರಿ'' ಎಂದು ಭವಿಷ್ಯ ಕೇಳುತ್ತಿದ್ದಳು. ಮತ್ತು ಮಾದೇವನತ್ತಿರ ಹೆಂಡತಿ ''ಏನ್ರಿ ಈ ತಿಂಗಳ ಇಸಾಳಘಡಕ್ಕ

ಹೋಗಿ ಕೈಗಿ ಕಡಗ ಹಾಕ್ಕೊಂಡ ಬೇಡಿಕೊಂಡ್ರ ನಮ್ಮೆಲ್ಲಾ ಆಶೆ ಈಡೇರ್ತಾವು" ಎಂದಳು. ಇನ್ನು ತಾಯಿ "ಯಪ್ಪಾ ಮಾದೂ ಕೇರಿಯ ಎಲ್ಲರೂ ಹೊಂಟಾರಾ ನಾನೂ ಹೋಗಿ ದಾನಮ್ಮಗ ತುಪ್ಪದ ದೀಪಾ ಹಚ್ಚಿ ಬರ್ತೀನಿ" ಅಂದಳು. ಅದಕ್ಕೆ ಮಾದೇವನು ಮೊದಲು ದೇವರು ದೇವತೆಗಳ ಬಗ್ಗೆ ಅಷ್ಟು ನಂಬಿಕೆ ಇಟ್ಟುಕೊಂಡಿರಲಿಲ್ಲ. ಆದರೂ ತಾಯಿಗೆ ಇಲ್ಲಾ ಇನ್ನೊಮ್ಮೆ ನಾವೆಲ್ಲರೂ ಹೋಗೋಣ ಎಂದು ಹೇಳಿದನು.

ಎಷ್ಟಾದರೂ ಯಾವ ಜಾತಿಯಾದರೂ ಓದಿದ ಮತ್ತು ಓದದೆ ಇರುವ ಮಕ್ಕಳ ಮಧ್ಯೆ ವ್ಯತ್ಯಾಸವಿರುತ್ತದೆ. ಓದಿದ ಮಕ್ಕಳು ದೈವವನ್ನು ಹೆಚ್ಚು ನಂಬಲ್ಲ. ಕೇವಲ ವೈಜ್ಞಾನಿಕ ಚಿಂತನೆ ಮಾಡುತ್ತಾರೆ ಎಂತಲೂ ಅಲ್ಲ, ಆದರೆ ಎಲ್ಲವನ್ನು ಸ್ವಲ್ಪ ವಿಚಾರಿಸಿ, ವಿಮರ್ಶೆಮಾಡುವರು. ಮಾದೇವನ ಸಹೋದರನಂತಿರುವ ಕೋಲ್ಕಾರನು ಸಹ ಕೌಟುಂಬಿಕ ದೈವೀ ನೆಲೆಯನ್ನು ತಿರಸ್ಕರಿಸಿ ಹೋರಾಟ, ಪ್ರತಿಭಟನೆ,ವಿರೋಧ ಅಂತೇಳಿ ಅಂಬೇಡ್ಕರ ತತ್ವಗಳಲ್ಲಿ ತಲ್ಲೀನನಾಗಿದ್ದನು. ತಾಯಿ ತನ್ನ ಮಗ ಕೋಲ್ಕಾರನನ್ನು ಉದ್ದೇಶಿಸಿ ಹಿಂದೆ ನಿನ್ನಪ್ಪ ಸಹಿತ ಹೀಗೆ ಅನ್ಯಾಯದ ವಿರುದ್ಧ ಹೋರಾಡಿದರೂ ಜನ ತಪ್ಪಾಗಿ ಭಾವಿಸಿ ಎಲ್ಲರೂ ಒಂದು ಕಡೆಯಾಗಿ ಬಡಿಯಲು ಬಂದಿದ್ದರು. ಆಗ ನಿನ್ನಪ್ಪ ಸತ್ತಿದ್ದರೆ ನೀನೆಲ್ಲಿ ಹುಟ್ಟುತ್ತಿರುವಿ ಅದಕ್ಕೆ ಅಷ್ಟೆಲ್ಲಾ ಸಹಕಾರ ಮಾಡಿದರೂ ಜನರು ದ್ರೋಹ ಬಗೆದರು. ಆದ್ದರಿಂದ ನೀನು ಆ ಹೋರಾಟ, ಧಿಕ್ಕಾರ ಅಂತೇಳಿ ತಿರುಗಾಡದೇ ದೇವರನ್ನು ನಂಬಿ ನಂಬಿಕೆಯಲ್ಲಿ ಬಾಳು ಎಂದಳು.

ಕೋಲ್ಕಾರನ ಸಲಹೆಯಂತೆ ಮಾದೇವ 'ದೇಶಪಾಂಡೆ' ವೈದ್ಯರಲ್ಲಿ ತೋರಿಸಿದ. ಮುಂದಿನ ತಿಂಗಳು ಬರ್ರಿ ಎಂದಿದ್ದಳು. ಒಂದು ದಿನ ರಾತ್ರಿ ಸುಮತಿ ತಾನು ಗರ್ಭಿಣಿಯಾಗಿದ್ದು ಮುಟ್ಟು ನಿಂತಿರುವುದು ಗೊತ್ತಾಗಿ ಪತಿಯಾದ ಮಾದೇವನ ಹತ್ತಿರ ಹೇಳಬೇಕಾದರೆ "ನಿನ್ನೌವ್ನ ಇಂಥಾ ಖುಷ್ ಖಬರಿ ಹಿಂಗ ಹೇಳ್ತಾರೇನು" (ಹೊ.ರಾ.ಪು. ೫೦) ಎಂದು ಅಪ್ಪಿಮುದ್ದಾಡಿದನು. ಮತ್ತು ದೇವರು ದಿಂಡ್ರು ಅಂತ ಕೂಡಬಾರದು, ವೈದ್ಯರಲ್ಲೇ ತೋರಿಸಬೇಕು ಎಂಬ ವೈಜ್ಞಾನಿಕ ಚಿಂತನೆ ಮಾಡಿದ. ಇನ್ನುಳಿದ ಎಲ್ಲಾ ಹಿರಿ-ಕಿರಿಯರು ಸಂತೋಷಪಟ್ಟರು. ತಾಯಿ ಬಂದು ದೇವರುಗಳ ಜೊತೆ ಅಂಬೇಡ್ಕರ ಫೋಟೋ ನೋಡಿ ಇಡಬಾರದು ಮಾದು ಅಂದಳು. ಮಾದೇವ "ದೇವರು ಏನ ಮಾಡ್ಯಾನ ಅಂಬೇಡ್ಕರ ಆದರೂ ನಮ್ಮನ್ನ ಮನಿಷ್ಯರನ್ನಾಗಿ ಮಾಡಿದ್ದಾನೆ" ಹೌದು ದೇವರು ಇರಬಹುದು. ಪ್ರತ್ಯಕ್ಷವಾಗಿ ಶ್ರಮವಹಿಸಿದವರು ಅಂಬೇಡ್ಕರ ಅವರಾಗಿದ್ದರು. ಹೀಗೆ ಮಾದೇವ ಸುಮತಿಯ ಸಂಸಾರ ಒಂದು ಹಂತದಲ್ಲಿ ಸುಖವಾಗಿ ಸಾಗುತ್ತಿತ್ತು. ಮಾದೇವ, ತನ್ನ ಇಲಾಖೆಯಲ್ಲಿ ೧೦-೧೨ ಜನ ದಲಿತರು ಇದ್ದರು. ಅವರುಗಳನ್ನು ಕೂಡಿಸಿ ಸಂಘಟಿಸಿ ಒಂದು ಸಂಘವನ್ನು ಮಾಡಿಕೊಂಡು ಅಧ್ಯಕ್ಷನಾಗಿದ್ದನು. ಕಾರ್ಯದರ್ಶಿ ನೇಮಾಡೆ, ಖಜಾಂಚಿ ಕೋಲ್ಕಾರ್ ಆಗಿದ್ದನು. ಸಂಘದ ಅಡಿಯಲ್ಲಿ ಅನೇಕ ರೀತಿಯಲ್ಲಿ ಪರಿವರ್ತನೆ ಸುಧಾರಣೆ ಸಮಾನತೆಯ ಅಂಶಗಳನ್ನು ಎತ್ತಿಹಿಡಿದು ಜೀವಿಸುತ್ತಿದ್ದರು.

ಅದೇ ಹೊಲಗೇರಿಯಲ್ಲಿ ತುಳಸವ್ವ ಮಗಳು ವಿಮಲಿ ಇದ್ದರು. ಅವರು ಜೋಗತಿಯಾಗಿ ಮನೆ ಮನೆ ಅಡ್ಡಾಡಿ ಭಿಕ್ಷೆ ಬೇಡಿ ತಿನ್ನುತ್ತಿದ್ದರು. ಅಷ್ಟಾಗಿದ್ದರೆ ಪರವಾಗಿಲ್ಲ, ಆದರೆ ವಿಮಲಿ ಮನೆ ಮನೆ ತಿರುಗುವಾಗಲೇ ಅಲ್ಲಲ್ಲಿ ಮಿಂಡರನ್ನು ಆಯ್ಕೆ ಮಾಡಿಕೊಂಡು ಬರುತ್ತಿದ್ದಳು. ಇದು ಹೀಗೆ ನಡೆದು ನಡೆದು ಬೆಳಗಾವಿ ಲಾಡ್ಜ್, ಹೋಟೆಲ್‌ಗಳೆಲ್ಲ ಇವಳಿಗಾಗಿ ಬುಕ್ ಆಗುತ್ತಿದ್ದವು. ಇಂತಹ ಪರಿಸ್ಥಿತಿಯಲ್ಲಿ ಮಾದೇವ ಸುಮ್ಮನಿದ್ದನು. ಒಂದು ದಿನ ಯಾರೋ ಮಾದೇವನೇನು ಮಾಡುವನು? ಸುಮ್ಮನೆ ಹೆಸರಿಗಷ್ಟೇ ಸಂಘ ಸಂಸ್ಥೆ ಅಂತಾನ, ಎನ್ನುವ ಮಾತು ಕಿವಿಗೆ ಬಿತ್ತು. ಆಗ ಅವನು ನೇರವಾಗಿ ತುಳಸವ್ವ, ಮತ್ತು ವಿಮಲಿಗೆ ''ನೋಡ್ರವ್ವ ನಿಮ್ಮ ದಂಧೆ ಬಿಟ್ಟು ನೆಟ್ಟಗೆ ದುಡಕೊಂಡು ತಿನ್ನೋದನ್ನೂ ಕಲಿಯಿರಿ ಬೇಕಾದರೆ ಸರ್ಕಾರದಿಂದ ಎರಡೆಮ್ಮೆ ಕೊಡಿಸ್ತೀನಿ ಸಾಕೊಂಡು ಬದುಕ್ರಿ'' ಎಂದನು.

''ನಾಯಿಬಾಲ ಡೊಂಕು'' ಎಂಬಂತೆ ಮಾದೇವನಿಗೆ ವಿರುದ್ಧವಾಗಿ ಎಮ್ಮೆಗೆ ಹುಲ್ಲು ನೀನು ತಂದು ಹಾಕ್ತೀಯಾ ಎಂದು ಅಪಹಾಸ್ಯ ಮಾಡಿದರು. ಸುಮತಿ ಬೈದು ಗಂಡನನ್ನು ಕರಕೊಂಡು ಹೋದಳು. ಮಾದೇವ ಸುಮ್ಮನಾದನು. ಇತ್ತ ವಿಮಲಿಯ ಮಿಂಡ ಬಾಬ್ಯಾ ಬಂದು ನೇರವಾಗಿ ಮಾದೇವನಿಗೆ ''ಏನಲಾ ಮಾದ್ಯಾ ನನ್ನನ್ನು ಬಿಡಿಸಿ ನೀನು ಇಟ್ಟುಕೋಬೇಕೆಂತ ಮಾಡಿಯೇನ'' ಎಂದು ಕುಡಿತದ ಅಮಲಿನಲ್ಲಿ ಅಂದೇ ಬಿಟ್ಟನು. ಕುದಿಯುತ್ತಿರುವ ರಕ್ತವನ್ನು ಹೊಂದಿರುವ ನವಯುವಕನಾದ ಮಾದೇವ ಎದ್ದು ಕೂಡಲೇ ಬಾಬ್ಯಾನ ಎದೆಗೆ ಝಾಡಿಸಿ ಒದ್ದು, ಮೇಲೆ ಕಲ್ಲು ಹೇರಲು ನೋಡುವಷ್ಟರಲ್ಲಿ ಇನ್ನು ರಾವಶ್ಯ ಪರಿಶ್ಯಾ ಬಂದು ಮೆತ್ತಗೆ ತಣಿಸಿದರು. ಅವನು ಇಲ್ಲಪ್ಪ ನಾನು ಬರಲ್ಲ ನಂದೇ ತಪ್ಪು ಎಂದು ಒಪ್ಪಿಕೊಂಡನು. ಆದರೂ ಬಿಡದೇ ಸೀದಾ ವಿಮಲಿಯ ಹತ್ತಿರ ಹೋಗಿ ಅವಳನ್ನೂ ಹಿಗ್ಗಾಮುಗ್ಗಾ ಹೊಡೆದರು.

ಆ ದಿನ ತುಳಸವ್ವ ಮನೆಯಲ್ಲಿರಲಿಲ್ಲ ಮಣಸಾಪುರದಿಂದ ಮರು ದಿವಸ ಬಂದಳು. ಮಗಳು ವಿಮಲಿ ನಡೆದದಕ್ಕಿಂತ ಹೆಚ್ಚಾಗಿಯೇ ಅಳುತ್ತಾ ರಾಗ ಹೇಳುತ್ತಾ, ನಡೆದ ಘಟನೆಯನ್ನು ಹೇಳಿದಳು. ಇದು ತುಳಸವ್ವಗೆ 'ಶಾಕ್' ಕೊಟ್ಟಂತಾಯ್ತು. ವಿಮಲಿ ತುಳಸವ್ವಗೆ ಚೀರುತ್ತಾ ಅಳುತ್ತಾ ಹೇಳುದನ್ನು ಕೇಳಿಸಿಕೊಂಡ ಕೇರಿಯ ರಾವಶ್ಯ, ಪರಿಶ್ಯಾ, ಖಂಡೋಬ, ಹೆಂಗಸರು, ಕರೆಪ್ಪಜ್ಜ ಹೀಗೆ ಎಲ್ಲರೂ ಏ ತುಳಸವ್ವ ಸತ್ತೇ ಹೋದಳೋ ಅದಕ್ಕೆ ವಿಮಲಿ ಇಷ್ಟು ಜೋರಾಗಿ ಅಳುವಳು ಅಂತ ಒಬ್ಬರೆಂದರೆ, ಇನ್ನೊಬ್ಬರು ಹೌದು ನನಗೆ ರಾತ್ರಿಯಲ್ಲಿ ಕೆಟ್ಟ ಕನಸು ಬಿದ್ದಿತ್ತು ಎಂದರೆ, ಮತ್ತೊಬ್ಬರು ಮನುಷ್ಯನ ಪ್ರಾಣ ಅಷ್ಟೇ ಯಾವುದಕ್ಕೂ ಬರೋಸ ಇಲ್ಲ ತುಳಸವ್ವ ಸತ್ತುಹೋಗಿದ್ದಾಳೆ ಎಂಬ ಕಲ್ಪನೇ ಮಾತ್ರ ಇತ್ತು. ತರುವಾಯ ತುಳಸವ್ವ ಮಾತು ಇಡೀ ಹೊಲಗೇರಿಗೆ ಕೇಳಿಸುವಷ್ಟು ಜೋರಾಗಿ ಕೂಗಾಡಿದಳು. ಅಂದುಕೊಂಡ ಮಾತುಗಳೆಲ್ಲವೂ ಗೌಣವಾದವು.

ತುಳಸಿ ಗಂಟಲು ಹರಿಯುವ ಪರಿವೇ ಇಲ್ಲದೆ ಎತ್ತರದ ಧ್ವನಿಯಲ್ಲಿ ''ಏ ಮಾದ್ಯಾ ಬಾಡ್ಯಾ ನೀ ಗಂಡಸ ಆಗಿದ್ರ ಹೊರಗೆ ಬಾರೋ ಹೊಲೇರ ಮನಿ ಬಾಡಾ ತಿಂದ ಸೊಕ್ಕಿಗಿ ಬಂದಿದಿ ಅವ್ವ ಅಪ್ಪ

ಇಲ್ಲದ ಮುಡದಾರ ನಾಯಿ ಕುನ್ನಿಯಂಗ ನಮ್ಮ ಕೇರ್‍ಯಾಗ ಬದುಕಿ ಈಗ ನಮಗಾ ಗುರಕಿ ಹಾಕ್ತಿ ಏನೋ ಲಡದೂ'' ಎಂದು ಒದರಾಡುತ್ತಿದ್ದಳು. ಹೀರಾಬಾಯಿ ಅಷ್ಟೊತ್ತಿಗೆ ತೀರಿಕೊಂಡಿದ್ದಳು. ಒಂದು ವೇಳೆ ಇದ್ದಿದ್ದರೆ. ತುಳಸಿಯ ರಕ್ತವನ್ನೇ ಕುಡಿಯುತ್ತಿದ್ದಳು. ಆದರೆ ಸುಮತಿ ಹೊಸದಾಗಿ ಮನೆಗೆ ಬಂದ ಹುಡುಗಿ ಆಕೆಗೇನೂ ಗೊತ್ತಿಲ್ಲ, ಅದಕ್ಕೆ ಸುಮ್ಮನೆ ಇದ್ದಳು. ಆದರೂ ಮಾದೇವನನ್ನು ''ಆ ಬೊಸ್ಯಾರಾ ಉಸಾಬರಿಗೆ ಹೋಗಬ್ಯಾಡ್ರಿ ಅಕೀ ಎಷ್ಟ ಹೊಯ್ಕೋತಾಳೋ ಹೊಯ್ಕೊಳ್ಳಿ'' ಎಂದು ಸಮಾಧಾನ ಮಾಡುತ್ತಿದ್ದಳು.

ಇತ್ತ ತುಳಸಿ ಸುಮ್ಮನಾಗಲೇ ಇಲ್ಲ ಮಾದೇವ ಪುನಃ ಅವಳನ್ನು ಬೈಯ್ದು ಜನ್ಮರಹಸ್ಯ ಗೊತ್ತಾದರೂ 'ಅನ್ನ ತಿಂದ ಮನೆಗೆ ಎರಡು ಬಗೆಯಬಾರದು' ಎಂದಂಗೆ, ತುಳಸಿಯ ವಿರುದ್ಧ ಕಂಪ್ಲೆಂಟ್ ಮಾಡಿದನು. ಪೋಲೀಸರು ಬಂದು ಸ್ಟೇಷನ್‌ಗೆ ಕರಕೊಂಡು ಹೋದರು. ಈ ಕಡೆ ಮಾದೇವನಿಗೆ ಮನಸ್ಸಿನಲ್ಲಿ ಬಿಗಿಯಾಗಿ ಇಟ್ಟುಕೊಂಡಿದ್ದ ವಿಚಾರ ಹೊರಗೆ ಬಂದೇ ಬಿಟ್ಟಿತು. ಅದೇನೆಂದರೆ ಅವನ 'ಜನ್ಮರಹಸ್ಯ' ಕುರಿತಾಗಿತ್ತು.

ಮಾದೇವನು ಅಷ್ಟೇ ಅಲ್ಲ ಹೆಂಡತಿಯಾದ ಸುಮತಿಯ ತಲೆಯಲ್ಲಿ ಗುಂಗಿ ಹುಳು ಹೊಕ್ಕಂತಾಗಿತ್ತು. ಅಂದಿನಿಂದಲೇ ''ವ್ಯವಸ್ಥೆಯ ವಿರುದ್ಧ ತನ್ನಲ್ಲಿ ಕುದಿಯುತ್ತಿದ್ದ ರೋಷ, ಅಂಬೇಡ್ಕರರ ಕುರಿತಾಗಿದ್ದ ಅಭಿಮಾನ, ತುಳಿತಕ್ಕೊಳಗಾದವರ ಬಗೆಗಿನ ಕಳಕಳಿ ಇವೆಲ್ಲವೂ ಬತ್ತಿಹೋದವು. ಕೂಡಲೇ ಸುಮತಿಗೆ ಸುಮಿ ಹೋಗಿ ಕರೆಪ್ಪಜ್ಜನ ಖಂಡೋಬಾನ ಕರಕೊಂಡು ಬಾ'' ಎಂದನು. ಅವನಿಗೆ ಜಾತಿಯಮೂಲ ತಿಳಿಯುವ 'ಬೀಜ' ಹುಟ್ಟಿಕೊಂಡಿತ್ತು. ಸುಮತಿಗೆ ಒಳಗೊಳಗೆ ಗಾಬರಿಯಾಗಿ ಹೆಂಗೋ ಹೋಗಿ ಖಂಡೋಬನನ್ನು ಕರಕೊಂಡು ಬಂದಳು. ಬಂದ ಖಂಡೋಬಾ ''ಶರಮ್ ಇಲ್ದ ಹೆಂಗ್ಸರ ಮಾತ ಅಷ್ಯಾಕ ಮನಸ್ಸಿಗಿ ಹಚ್ಕೊತಿ ಬಿಡು'' ಎಂದರೆ ಮಾದೇವನು ಇಲ್ಲಾ ನಾನು ಅದಕ್ಕೆ ತಲೆ ಕೆಡಿಸಿಕೊಂಡಿಲ್ಲ ನಾನು ಯಾರು? ನಾನು ಯಾವ ಜಾತಿಯವ? ಮತ್ತು ನಾನು ಯಾಕ ಇಲ್ಲಿಗೆ ಬಂದೆ? ಎಲ್ಲವನ್ನು ಸವಿವರವಾಗಿ ತಿಳಿಯಬೇಕು ಅದಕ್ಕೆ ಹಿರ್‍ಯಾರು ನೀವೇ ಇದ್ದೀರಿ ನಿಮಗೆಲ್ಲ ಗೊತ್ತಿರುತ್ತೆ ಅದೆಲ್ಲಾ ಹೇಳು ಎಂದು ಹಠಹಿಡಿದನು.

ಖಂಡೋಬಾ ಮಾದೇವನಿಗೆ ನೋಡಪ್ಪ ನಾನು ನಿನ್ನಪ್ಪನಿಗೆ ಎಂದ ಕೂಡಲೇ ಮಾದೇವ ಹುಟ್ಟಿಸಿದವನೇ? ಸಾಕಿದವನೆ? ಎಂದು ಪ್ರಶ್ನೆ ಹಾಕಿದನು. ಆಗ ಖಂಡೋಬನ ಕರುಳು ಚುರ್ರೆಂದಿತು. ಸುಮತಿಯ ಮುಖದಲ್ಲಿ ನೋವನ್ನು ಕಂಡು, ಖಂಡೋಬಾ ನಾನು ನಿನ್ನಪ್ಪನಿಗೆ ಮಾತು ಕೊಟ್ಟಿದ್ದೇನೆ ಅದಕ್ಕೆ ನೀನು ಸುಮಿಯನ್ನು ಕೈ ಬಿಡಲ್ಲ ಅಂತ ಮಾತು ಕೊಟ್ಟರೆ ಹೇಳುವೆ ಎಂದನು. ಅಷ್ಟು ಹೇಳಿ ''ನಿ ಹುಟ್ಟಿದ್ದು ರಾಜಾನ ಹೊಟ್ಟ್ಯಾಗ ಖರೆ, ನಿನ್ನ ಅಪ್ಪನ ತಮ್ಮ ಸಂಭಾಜಿರಾವ ನಿನ್ನಪ್ಪನನ್ನು ನಿನ್ನ ತಾಯಿಯನ್ನು ಸಾಯಿಸಿ ನಿನ್ನನ್ನೂ ಸಾಯಿಸಲು ನೋಡುತ್ತಿರಬೇಕಾದರೆ, ಪಾಪ ನಾನಾಸಾಹೇಬ ಎನ್ನುವ

ಮಂತ್ರಿಯೇ ನಿನ್ನ ಇಲ್ಲಿ ತಂದು ಬಿಟ್ಟು ಹೋಗಿದ್ದಾನೆ. ಮತ್ತು ಅವನು ಯಾರಿಗೂ ಈ ವಾರ್ತೆ ಗೊತ್ತಾಗಬಾರದು ಅಂತ ಜಾನೂಬಾ ಹತ್ತಿರ ಮಾತು ತಗೊಂಡಿದ್ದ ಅದೇ ರೀತಿ ನಾನೂ ನಿನ್ನಪ್ಪನ (ಜಾನೂಬಾ) ಹತ್ತಿರ ತಗೊಂಡಿದ್ದೆ. ನೀನು ಇಲ್ಲಿ ಬಂದಿಯಂತ ಉಳಿದಿ ಇಲ್ಲದಿದ್ದರೆ ಅವತ್ತೆ ಮಣ್ಣುಪಾಲಾಗಿ ಹೋಗುತ್ತಿದ್ದಿ" ಹೀರಾಬಾಯಿ ಜಾನೂಬಾ ನಿನ್ನ ಸ್ವಂತ ಮಗನಂತೆ ನೋಡಿಕೊಂಡಿದ್ದಾರೆ. ನಿನಗ ಮುಳ್ಳ ಮುರಿದರೂ ಹೀರಾಬಾಯಿ ಅಳುತ್ತಿದ್ದಳು. ಕೇರಿಯ ಬೇರೆ ಹುಡುಗರು ಹೇಗಿದ್ದಾರೆ ನೀನು ಹೇಗಿದ್ದಿಯಾ? ಗೊತ್ತಿಲ್ಲ ನಿನಗೆ ಆ ಹುಡುಗರು ಹಮಾಲಿಗೆ ಹೋಗ್ತಾರು ಎಂದು ಜನ್ಮರಹಸ್ಯ ಹೇಳುವುದರೊಂದಿಗೆ ವಾಸ್ತವವನ್ನು, ಬುದ್ಧಿಯನ್ನು ಹೇಳಿ ನಂಬಿಕೆ ದ್ರೋಹಮಾಡಬೇಡ ಎಂಬ ಅರ್ಥವುಳ್ಳ ಸಂದೇಶವನ್ನು ನೀಡಿದನು.

ಮಾದೇವನು ಖಂಡೋಬಾನ ತಿಳುವಳಿಕೆ ಮಾತು ಕೇಳಿದರೂ ಮನಸ್ಸಿನಲ್ಲಿ ನಾನು ಹೊಲೆಯನಲ್ಲ ಎಂಬ ಪ್ರಜ್ಞೆ ಹಿಡಿದಿಟ್ಟಿತು. ಸುಮತಿಯನ್ನು ಯಾವುದಕ್ಕೂ ಲೆಕ್ಕಿಸಲಿಲ್ಲ. ಸುಮತಿ ನನ್ನ ಇಪ್ಪತ್ತು ವರ್ಷಗಳ ಬಂಧನವು ಕಳಚುವುದು ನನ್ನ ಅತ್ತೆಮಾವಂದಿರು ಇದ್ದಿದ್ದರೆ ಒಂದು ಲೆಕ್ಕ ಆಗುತ್ತಿತ್ತು ಎಂದು ತನ್ನ ಮಕ್ಕಳೆರಡನ್ನೂ ಎದೆಗೆ ತಬ್ಬಿಕೊಂಡು ಅಳುತ್ತಾ ಮಲಗಿದಳು. ಸುಮತಿ ಅಸಹಾಯಕಳಾಗಿ ಒಬ್ಬಳೇ ಮನೆಯಲ್ಲಿ ಇದ್ದಳು ತವರಿನವರು ಬಂದಿರಲಿಲ್ಲ.

ಮಾದೇವನ ಮನಸ್ಸು ತುಂಬಾ ಸಂಘರ್ಷಕ್ಕೀಡಾಗಿ ಸಮಾಧಾನವಿಲ್ಲದೇ ಹಲುಬುವಂತಾಯಿತು. ಅವನ ಮನಸ್ಸು ನನ್ನನ್ನು ಹೀರಾಬಾಯಿ ಜಾನೂಬ ಯಾಕೆ ಹೊಲೆಯನೆಂದು ಬೆಳೆಸಿದರು? ಹೊಲೆಯ ಹುಡುಗಿಯನ್ನೇಕೆ ಮದುವೆ ಮಾಡಿದರು? ನಾನು ಮರಾಠ ಆಗಿದ್ದೂ ಬುದ್ದಿತಿಳಿಯುವ ವಯಸ್ಸಿನಿಂದಿಡಿದು ಇವತ್ತಿಗೂ ಜನರು ನನ್ನನ್ನು ಹೊಲೆಯ, ಅಸ್ಪೃಶ್ಯ, ಕೀಳು, ಹೊಲಸು ಜಾತಿಯವನೆ ಎಂದು ಇತ್ಯಾದಿ ರೀತಿಯಲ್ಲಿ ಗುರ್ತಿಸಿ ಮನಸ್ಸಿಗೆ ನೋವಾಗಿದೆ. ಮಾನಸಿಕವಾಗಿ ನನ್ನನ್ನು ಕುಬ್ಜನನ್ನಾಗಿಸಿದ ಪಾಖಂಡಿಗಳನ್ನೆಲ್ಲ ಸಾಲಾಗಿ ನಿಲ್ಲಿಸಿ, ''ಎಲ್ಲೈ ನೀಚ ಸೂಳೇ ಮಕ್ಕಳೇ ನೀವು ತಿಳಿದುಕೊಂಡಂತೆ ನಾನೇನು ಮಹಾರ ಅಲ್ಲ ನಾನು ಶ್ಯಾಣವ್ವಕುಳಿ ಕ್ಷತ್ರಿಯರ ಸೂರ್ಯವಂಶದ (ಕುಲದ) ಕುರುಂದವಾಡದ ರಾಜ ಅಚ್ಯುತರಾಯರ ಮಗ ಮಾಧವರಾವ ಗಾಯಕವಾಡ" ಎಂದು, ಎದೆಗೆ ಒದ್ದು ಹೇಳುವಷ್ಟು ಸಿಟ್ಟು ಮಾದೇವನಿಗೆ ಬಂದಿತ್ತು.

ಅಷ್ಟೇ ಅಲ್ಲದೆ ಶಾಲೆಯಲ್ಲಿ ಸಹಪಾಠಿಯಾಗಿದ್ದ ಆನುಷಾದೇಶಪಾಂಡೆಯನ್ನು ಚರಣ ದಾಸಿಯಂತೆ ಇಟ್ಟುಕೊಳ್ಳಬೇಕು. ಜೊತೆಗೆ ಒಂದು ದಿನವಾದರೂ ಮಲಗಿಸಿಕೊಳ್ಳಬೇಕು. ಅವಳು ರಾಜರೇ ನಾನು ತಪ್ಪುಮಾಡಿದೆ ಕ್ಷಮಿಸು ಅನ್ನೇಕು. ಸುಮತಿ ಮಕ್ಕಳು ಇವರು ಯಾರೂ ನನ್ನವರಲ್ಲ ಇವು ನನಗೆ ಸಂಬಂಧನೇ ಇಲ್ಲ ನಾನು ಮಹಾರಾಜ ಅವರು ಹೊಲೆಯರು. ನನ್ನ ಧರ್ಮ ಕುಲವನ್ನು ಕೆಡಿಸಿದ ಹೊಲತಿ ಎಂದು ಸುಮತಿಯನ್ನು ತಿರಸ್ಕಾರ ಮಾಡಿದನು. ಪ್ರಪಂಚದಲ್ಲಿರುವ ಪ್ರತಿಯೊಬ್ಬ ಪ್ರಜೆಯೂ ಸಹಜವಾಗಿ ನಾನು ಉನ್ನತ ಸ್ಥಾನದಲ್ಲಿರಬೇಕು. ಎಲ್ಲರೂ ನನ್ನನ್ನು ಮೆಚ್ಚಬೇಕು. ಎಲ್ಲರೂ ನನ್ನನ್ನು

ಇಷ್ಟಪಡಬೇಕು. ಎಲ್ಲರೂ ನನ್ನನ್ನು ಗೌರವದಿಂದ ಕಾಣಬೇಕು. ಎಂಬೆಲ್ಲಾ ಯೋಚನೆಗಳನ್ನು ಮಾಡುತ್ತಾನೆ ಅದರಂತೆ ಜಾತಿಯ ಶ್ರೇಷ್ಠತೆಯೂ ಒಂದು. ಮಾದೇವ ಜಾತಿಯಿಂದ ಕ್ಷತ್ರಿಯ ಆಗಿ ಕೀಳರಿಮೆ ಸಹಿಸುವುದು ಅಸಾಧ್ಯ ಅನಿಸಬಹುದು ಏಕೆಂದರೆ ಮನುಷ್ಯನ ಹುಟ್ಟುಗುಣ.

ಇನ್ನು ಮಾದೇವ ಮನಸ್ಸಿನಲ್ಲಿ ಇಡೀ ಹೊಲಗೇರಿಯನ್ನೇ ನಿರ್ನಾಮ ಮಾಡಬೇಕು. ಅಲ್ಲಿರುವ ಖಂಡೋಬಾನನ್ನು ಗಡಿಪಾರು ಮಾಡಬೇಕು ಮತ್ತು ತುಳಸಿ ವಿಮಲಿಯನ್ನು ಅರಮನೆಯಲ್ಲಿ ದೇವತೆಗಳಂತೆ ನೋಡಬೇಕು ಎಂಬ ಕಲ್ಪನೆ ಮೂಡಿತು. ಮೊದಲು 'ದೇವರು' ಅಂದ ಕೂಡಲೇ ಬೈಯುವ ಮಾದೇವ ತುಳಸಿ ವಿಮಲಿಯನ್ನು ಪೂಜ್ಯ ಭಾವನೆಯಿಂದ ಅಂತಃಪುರದಲ್ಲಿಟ್ಟುಕೊಂಡು ಬದುಕಬೇಕು ಎಂದುಕೊಂಡನು. ಒಂದು ಕಡೆ ಮಾದೇವನಿಗೆ ಮನಸ್ಸು ''ಯಾಕೆ ಇಂಥ ಕೋಪ ಕ್ರೋಧ ಅಬ್ಬರ'' ಇಂಥ ಕಷ್ಟ ಅನುಭವಿಸಿದ ರಾಜಕುಮಾರ ನೀನೊಬ್ಬನೇ ಏನು? ಬಹಳ ಜನ ಇದ್ದಾರೆ. ರಾಮ, ಲಕ್ಷ್ಮಣ, ನಳ, ಪಾಂಡವರು ಮತ್ತು ಸತ್ಯಹರಿಶ್ಚಂದ್ರ ಇವರೆಲ್ಲ ರಾಜ್ಯವನ್ನು ತೊರೆದು ತ್ಯಾಗ ಮಾಡಿ ವನವಾಸಮಾಡಿದ್ದಾರೆ ಎಂದು ಹೇಳುತ್ತದೆ. ಅದೇ ಮಾದೇವನ ಮನಸ್ಸು ಇನ್ನೊಂದು ಕಡೆ ಹೌದು ಅವರೆಲ್ಲ ವನವಾಸ ಮಾಡಿದರು ನಿಜ ಆದರೆ ಅವರು 'ರಾಜವಂಶಸ್ಥ' ಉನ್ನತ ಸಂಸ್ಕೃತಿವಂತರು ಎಂದೇ ಸಮಾಜದಲ್ಲಿ ಬಿಂಬಿತರಾಗಿದ್ದರು. ನಾನು ಹೊಲೆಯನಾಗಿಯೇ ಜೀವನ ಮಾಡಬೇಕಾಯ್ತು. ಹೀರಾಬಾಯಿ ಮಗನೇ ನೀನು ಮಹಾರನಲ್ಲ ಎಂದು ಒಂದೇ ಮಾತು ಹೇಳಿದ್ದರೆ ಹೆಮ್ಮೆಯಿಂದ ಬದುಕುತ್ತಿದ್ದೆ ಎಂದಿತು. ಸುಮಾರು ೧೨ ತಾಸುಗಳ ಏಕಾಂಗಿಯಾಗಿ ಇದ್ದ ಮಾದೇವನನ್ನು ಮಾತಾಡಿಸಿ ಚಹಾ, ಚಪಾತಿ ತಂದಿಟ್ಟರೆ ಮುಟ್ಟದೇ ಮಾತಾಡದೇ ಸೀದಾ ಹೊರಗೆ ಹೋದನು. ಇದು ಸುಮತಿಗೆ ಅಷ್ಟೇ ಅಲ್ಲ ಇಡೀ ಮಹಾರವಾಡದಲ್ಲಿಯೇ ಎಲ್ಲರೂ ಗುಸು-ಗುಸು ಮಾತಾಡುವಂತಾಯ್ತು.

ಮಾದೇವನಿಗೆ ಜಾತಿಯ ಹುಚ್ಚು ಬಿಡಲಿಲ್ಲ ತನ್ನ ಸೋದರಮಾವ ಸೋದರತ್ತೆ ಮತ್ತು ನಾನಾಸಾಹೇಬನ ಹುಡುಕಾಟದಲ್ಲಿ ನಿರಂತರ ಕಾರ್ಯಶೀಲನಾಗಿದ್ದನು. ಜಾತಿಯೆಂಬ ಮಾಲೆ ಧರಿಸಿ ಜನಸಾಮಾನ್ಯರನ್ನು ಹೀನಾಯವಾಗಿ ಕಾಣುವ ತಾನು ಬೆಳೆದ ಹೊಲಗೇರಿಯನ್ನು 'ಹೊಲಸು' ಎಂದು ತಾನೇ ಅಂದುಕೊಳ್ಳುವಷ್ಟು ಬೆಳೆದನು. ಈ ಮೊದಲು ಇರುವ ದಲಿತರ ಪ್ರೇಮ, ಪ್ರೀತಿ, ವಿಶ್ವಾಸ, ನಂಬಿಕೆ ಎಲ್ಲವೂ ನೀರು ಪಾಲಾದವು.

ಮಾದೇವನ ತೀರ್ಮಾನ ಇಡೀ ಹೊಲಗೇರಿಗೇ ಗೊತ್ತಾಗಿರುವುದರಿಂದ ಯಾರೂ ಮಾತನಾಡಿಸಲಿಲ್ಲ ಕೊನೆಗೆ ಹೆಂಡತಿ ''ಏನ್ರಿ ಮುಂಜಾನೆ ಎದ್ದ ಚಾ ಸಹ ಕುಡಿಲಾರ್ದ ಹಂಗ ಹೋಗೀರಿ, ಚೆಂಥಾನಕ ಊಟ ಸಹ ಮಾಡಿಲ್ಲ ಏಳ್ರೀ ಅಡಿಗಿ ಮಾಡಿದ್ದೆಲ್ಲಾ ಆರಿ ಹೊಂಟೈತಿ'' ಎಂದು ಕೇಳುವಳು ಎಂಬ ಭಾವನೆ ಮಾದೇವನಲ್ಲಿ ಮೂಡಿತ್ತು ಆದರೆ ಅವಳು ಕೇಳಲಿಲ್ಲ. ಹೌದು ಹೆಂಗಸರು ಸಹ 'ಗತ್ತ'ನ್ನು ತೋರಿಸುವ ಯೋಚನೆಯಲ್ಲಿರುವರು.

ಖಂಡೋಬಾ ಮಾದೇವನ ಮನೆಗೆ ಬಂದು ಪರಿಸ್ಥಿತಿಯನ್ನು ಗಮನಿಸಿದನು. ಮಾದೇವನ ತಳಮಳ ಇನ್ನೂ ಹೆಚ್ಚಾಗುತ್ತಲೇ ಇತ್ತು. ಮಕ್ಕಳನ್ನು ಪ್ರೀತಿಸುವ ಹೃದಯ ಕಲ್ಲಾಗಿತ್ತು. ಇದನ್ನು ತಡೆಯದೇ ಖಂಡೋಬಾ ಸಿಟ್ಟಿನಿಂದ ನೋಡಪ್ಪ ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಿದಿ ನಿಜ ಅದು ನಮ್ಮಿಂದಲೇ ಗೊತ್ತಾಗಿದ್ದು ನೀನು ಅಲ್ಲಿ ಇದ್ದಿದ್ದರೆ ಉಳಿಯುತ್ತಿರಲಿಲ್ಲ. ನಿನ್ನ ತಂದೆ ತಾಯಿಯನ್ನು ನಿನ್ನ ಚಿಕ್ಕಪ್ಪನೇ ಸಾಯಿಸಿದ್ದು, ನೀನು ಇಷ್ಟೆಲ್ಲಾ ಬೆಳೆಯಬೇಕಾದರೆ ಈ ಹೊಲಗೇರಿಯೇ ಕಾರಣ. ನೋಡು ಉಂಡ ಅಗಲಾಗ (ತಟ್ಟೆ) ಉಚ್ಚೆಹೊಯ್ಯಬೇಡ'' ಎಂದು ಹೇಳಿ ಹೊರಟನು.

ಖಂಡೋಬಾ ಹೇಳಿದ ನಿಜರೂಪ ಮನಸ್ಸಿಗೆ ನಾಟಿತೋ ಏನೋ ಗೊತ್ತಿಲ್ಲ ಮಾದೇವನು ಇದ್ದಕ್ಕಿದ್ದಂತೆ ಸುಮತಿಗೆ ''ಹುಡುಗುರಿಗಿ ಊಟಕ್ಕ ಹಾಕಿದಿ ಇಲ್ಲೋ?'' ಎಂದು ಮೆತ್ತಗೆ ಕೇಳಿದಾಗ ಸುಮತಿ ''ಇಷ್ಟ ದೌಡ ಯಾಕ ಕೇಳಕತ್ತೀರಿ? ಅವು ಸತ್ತಹ್ಯಾದ ಮ್ಯಾಲೇ ಕೇಳೂವಂತ್ರಿ ಬಿಡ್ರಿ'' ಎಂದು ಚುಚ್ಚು ಮಾತಾಡಿದಳು. ಸುಮತಿಗೆ ಒಳಗೊಳಗೆ ಆನಂದದ ಅರಿವಾಯ್ತು ಒಂದೆಡೆ ಸಿಟ್ಟು ಬರುತ್ತಿತ್ತು. ಮನೆಯಲ್ಲಿರುವ ಎಲ್ಲಾ ಪಾತ್ರೆಗಳನ್ನು ಒಡೆದು ಸದ್ದುಮಾಡುತ್ತಿದ್ದಳು. ಇದು ಹೆಣ್ಣಿನ ಪರ್ಯಾಯ ವ್ಯವಸ್ಥೆ ಸಿಟ್ಟನ್ನು ಪಾತ್ರೆಗಳ ಮೇಲೆ ತೀರಿಸಿಕೊಳ್ಳುವುದು.

ಅಷ್ಟಾದರೂ ಮಾದೇವ ಸುಮತಿ ಪುನಃ ಇಬ್ಬರೂ ಅಪ್ಪಿಕೊಂಡು ಮಲಗಿದರು. ಸುಮತಿಗೆ ನೋವನ್ನು ಮರೆತಂತಾಯ್ತು. ಮರುದಿನ ಬೆಳಿಗ್ಗೆ ಅಂಬೇಡ್ಕರ ಫೋಟೋ ಮತ್ತು ಶಿವಾಜಿ ಫೋಟೋ ಸಂಬಂಧ ಗಂಡ ಹೆಂಡತಿ ನಡುವೆ ಸ್ವಲ್ಪ ಗದ್ದಲ ಉಂಟಾಯಿತು. ರಾತ್ರಿ ಸಲಿಗೆಯಿಂದಿದ್ದಿರುವ ಯೋಚನೆಯಿಂದಲೇ ಸುಮತಿ ಎಲ್ಲಾ ರೀತಿಯಿಂದಲೂ ಪ್ರಶ್ನೆ ಹಾಕಿದಳು. ಅಲ್ಲರಿ, ನೀವು ಎಸ್ಸೀ ಅಂತೇಳಿ ನೌಕರಿ ಪಡೆದೀರಿ ಅಂಬೇಡ್ಕರ ಬಗ್ಗೆ ಪೂರ್ಣ ಗೌರವವಿದೆ ಈಗ ಯಾಕೆ ಈ ಹುಚ್ಚು ಜಾತಿಯನ್ನು ಇಟಕೊಂಡು ಕೊರಗುವಿರಿ? ಅಂದಳು. ಅಷ್ಟಕ್ಕೆ ಮಾದೇವನಿಗೆ ಮನಸ್ಸಿನಲ್ಲಿ ಮೂಡಿದ 'ಜಾತಿ ಶ್ರೇಷ್ಟತೆ' ಕಲ್ಪನೆ ಜಾಸ್ತಿಯಾಗಿ ''ಆ ಹೊಲ್ಯಾರಂಗ ಮಾಡಬೇಡ'' ಎಂದವನೇ ಸುಮತಿಗೆ ಮುಂದುವರಿದು ಆ ಅಂಬೇಡ್ಕರ ಫೋಟೋ ತಗೆದು ಶಿವಾಜಿ ಫೋಟೋ ಹಾಕಿ ಹೂಮಾಲೆ ಧರಿಸಿ ಒರಸುತ್ತಿರಬೇಕಾದರೆ, ಸುಮತಿಯು ಸಹ ಸಿಟ್ಟಿಗೇರಿದಳು. ಹೀಗೆ ಕಳೆದ ರಾತ್ರಿ ಒಂದಾದ ಮನಸ್ಸುಗಳು ಮರುದಿನ ಬೆಳಿಗ್ಗೆ ಒಡೆದು ಹೋದವು. ಸುಮತಿ ಯಾಕೆ ಇವ್ನ ಕೆಣಕಿದ್ನೆ ಯವ್ವ ಎಂದು ತುಂಬಾ ಗಾಬರಿಯಾದಳು.

ಸುಮತಿ ಗಾಬರಿಯಾಗಿದ್ದರೂ ಮಾದೇವನಿಗೆ ಮಾತಿಗೆ ಮಾತು ಸೇರಿಸುತ್ತಿದ್ದಳು. ಮಾದೇವ ಮೊದಲು ಶಿವಾಜಿಯನ್ನು ತಿರಸ್ಕರಿಸಿ ಮೂಲೆಗೆಸೆದಿದ್ದ. ಅಂಬೇಡ್ಕರನ್ನು ಪೂಜಿಸುತ್ತಿದ್ದ ಈಗ ಸಂಪೂರ್ಣ ವಿರುದ್ಧವಾಯಿತಲ್ಲ ಎಂದು ಯೋಚಿಸುತ್ತಿದ್ದಳು. ಮಗಳು ಮಾದೇವನಿಗೆ ಬಾಬಾ ಆ ಗಡ್ಡದವಾ ಯಾರು ಎಂದು ಶಿವಾಜಿ ಫೋಟೋ ತೋರಿಸಿದಾಗ ತಂದೆ ಅವನು ನಿನ್ನವ್ವನಗೆಣ್ಯಾ ಅಂತ್ಹೇಳಿ ಸುಮತಿಯನ್ನು ಇನ್ನಷ್ಟು ಸಿಟ್ಟಿಗೇರಿಸಿದನು. ಸುಮತಿ ಹುಟ್ಟಿದ ಈ ಇಬ್ಬರು ಮಕ್ಕಳು ಯಾರು? ಮಾದೇವ ಮೊದಲು

ನಾವಿಬ್ಬರೂ ಒಂದೇ ಎಂದಿದ್ದ ಪ್ರೀತಿ ಎಲ್ಲಿ? ಈ ಜಾತಿ ಮನುಷ್ಯನಿಗೆನಾ ಅಥವಾ ಮನುಷ್ಯನೇ ಜಾತಿಗಾಗಿನಾ? ಎಂದು ಚಿಂತಾಕ್ರಾಂತ ಆದಳು.

ಹೆಣ್ಣಿನ ಮನಸ್ಸು ಎಷ್ಟಾದರೂ ಮೃದು ಎಂಬುದಕ್ಕೆ ಸುಮತಿಯೇ ಸಾಕ್ಷಿಯಾಗಿದ್ದಾಳೆ. ಅವಳು ಮಾದೇವನು (ಗಂಡ) ಇನ್ನು ಬರಲೇ ಇಲ್ಲ. ನಾನು ಸುಮ್ಮನೇ ಅಂಬೇಡ್ಕರನ ತತ್ವವಿಚಾರಗಳನ್ನು ನೆಪವಾಗಿಟ್ಟುಕೊಂಡು ಶತ್ರುವಾದೆ. ಹೌದು ಅವನದೇನು ತಪ್ಪಿಲ್ಲ. ಅವನು ಇಷ್ಟು ವರ್ಷ ನನ್ನನ್ನು ಅಂಗೈಯಲ್ಲಿಯೇ ಇಟ್ಟುಕೊಂಡಿದ್ದ 'ಜಾತಿ' ಎಂಬ ಕಲ್ಪನೆಯೇ ಈ ರೀತಿ ಮಾಡಿತು. ಇರಲಿ ಪ್ರಪಂಚದಲ್ಲಿ ಅಥವಾ ಹಿಂದೆ ಸಾವಿತ್ರಿ, ಸೀತೆ, ಅರುಂಧತಿ ಮತ್ತು ದಮಯಂತಿಯರು ಹೇಗೆ ಗಂಡನ ನೆರಳಿನಲ್ಲಿಯೇ ಇದ್ದರು ಪರಿಸ್ಥಿತಿ ಕೊಟ್ಟ ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡಿದ್ದರು. ಹಾಗೆಯೇ ನನ್ನದೂ ಒಂದು ಎಂದು ತನ್ನನ್ನು ತಾನು ಸಮಾಧಾನಮಾಡಿಕೊಂಡಳು. ಮಗಳು ತಾಯಿಗೆ 'ಬಾಬಾ ಇನ್ನು ಬರಲಿಲ್ಲ' ಎಂದು ಕೇಳಿದಳು. ಸುಮತಿ ಹೌದು ಅಮ್ಮ ತಡಾ ಆಕೈತಿ ನೀ ಮಲಗು ಅಂತೇಳಿ ಕೂಡಲೇ ಪರಸಣ್ಣಗೆ ''ಪರಸಣ್ಣ ಅವರು ನಿನ್ನೆಯಿಂದ ಮನಿಗೇ ಬಂದಿಲ್ಲ. ಅವರ ಆಫೀಸಿಗೆ ಹೋಗಿ ಜರಾ ನೋಡ್ಕೊಂಡ ಬರ್ರಿ'' ಎಂದು ಅಷ್ಟೇ ಪ್ರೀತಿ, ಅನುಕಂಪ, ವಿಶ್ವಾಸದಿಂದ ಹೇಳಿದಳು.

ಅಷ್ಟೇ ವಿಶ್ವಾಸದಿಂದ ಪರಿಶ್ಯಾ ಹೋಗಿ ಟಿಳಕವಾಡಿ ಟೆಲಿಫೋನ್ ಆಫೀಸಿಗೆ ಬಂದು ಅಲ್ಲಿ ಗಾರ್ಡ್‌ಗೆ ನಮಸ್ಕಾರ ಹೇಳಿ, ನಮ್ಮ ಮಾದೇವ ಇದ್ದಾನೇನ್ರಿ ಅಂದನು. ಆಗ ಅವನು ಯಾವ ಮಾದೇವ, ಮಾದೇವ ಕಾಂಬಳೇ ಏನು? ಅಂದನು ಹೌದು ಅವನೇ ಎಂದು ಪರಿಶ್ಯಾ ಹೇಳಿದನು. ಒಳಗೆ ಮಾದೇವ ಗಾರ್ಡಗೆ ಬಂದಿಲ್ಲ ರಜಾಹಾಕಿದ್ದಾನೆ ಎಂದೇಳು ಅಂತ ಸನ್ನೆ ಮಾಡಿದನು ಅದರಂತೆ ಗಾರ್ಡ್ ಬಂದು ಪರಿಶ್ಯಾಗೆ ಹೇಳಿದ. ಪರಿಶ್ಯಾ ಇನ್ನೇನು ಮಾಡಲೂ ಅಸಹಾಯಕನಾಗಿ, ಬಂದ ದಾರಿಗೆ ಸುಂಕ ಇಲ್ಲ ಎಂಬಂತೆ ಮರಳಿ ಬಂದನು. ಅತ್ತ ಮಾದೇವ ''ಈಗ ಮನ್ಯಾಗ ರೊಕ್ಕಾನೂ ಇಲ್ಲ ಕಿರಾಣಿ ಸಂತೇನೂ ಇಲ್ಲ ಅದಕ್ಕೆ ಲೌಡಿಗಿ ನನ್ನ ಗರಜ ಬಿದ್ದೈತಿ, ಇಷ್ಟ ದಿವಸ ನೌಕರಿ ಮಾಡಿ ಹಾಕುತ್ತಿದ್ದೆ ಕುಂತ ತಿಂತಿದ್ದಳು ಈಗ ಗೊತ್ತಾಗತ್ತಿ ಬಿಸಿ, ಗಂಡ ಅಂದ್ರೆ ಏನೂ ದರಕಾರಿಲ್ಲಾ ಭೋಸ್ಡಿಗಿ, ಇನ್ನ ಶೆಗಣಾ ತಿನ್ನಲಿ'' ಎಂದು ಬೈಯುತ್ತ ಆನಂದ ಪಡುತ್ತಿದ್ದ. ಇನ್ನ ಮೇಲೆ ಈ ಹೊಲೇರ ಸುದ್ದೀನಾ ಬೇಡ ಎಂದು ಎಸ್ಸಿ ಎಸ್.ಟಿ ಅಸೋಸಿಯೇಶನಗೆ ರಾಜಿನಾಮೆ ಪತ್ರ ಬರೆದು ಕೋಲ್ಕಾರನಿಗೆ ಬಿಸಾಕಿದನು.

ಮಾದೇವನು ವಾಘಮೋರೆಗೆ ನನಗೆ ಒಂದು ಕನ್ಯಾ ನೋಡ್ರಿ, ಎಂದು ಕೇಳುವುದಕ್ಕಿಂತ ಮುಂಚೆ ನಾನು ಮರಾಠ ಕುಡಿ ಅಂತ ಗೊತ್ತಾದ ಕೂಡಲೇ ಚುಲೋ ಆಯ್ತು ಬಿಡ್ರಿ ನಾನೊಬ್ಬನೇ ಶ್ಯಾಣಪ್ಪ ಕುಳಿಯಾಗಿದ್ದೆ ನೀನು ಬಂದು ಚೆನ್ನಾಗಿ ಆಯ್ತು ''ನಿನಗೇನೇ ಕಡಿಮೆ, ಒಂದು ನಾಡಿನ ರಾಜ ಅಂದ ಮೇಲೆ ಯಾರು ಬೇಕಾದರೂ ಕನ್ಯೆಯನ್ನು ಕೊಡಲು ಸಾಲಾಗಿ ಮುಂದೆ ಬರುತ್ತಾರೆ. ಅದಕ್ಯಾಕೆ ಚಿಂತೆ ಮಾಡುವಿರಿ. ನಾನಿದ್ದೀನಿ, ಅಂದಾಂಗ ಸಂಜೀ ಕಡೆ ಟೈಮು ಸಿಕ್ಕರೆ ಮನೀ ಕಡೀ ಬರ್ರಿ, ಇಬ್ಬರೂ ಕೂಡಿ

ಊಟ ಮಾಡೋಣು ಅನ್ನುವನು'' ಎಂದು ಭಾವಿಸಿದ್ದೆಲ್ಲಾ ಸುಳ್ಳಾಯಿತು. ವಾಘಮೋರೆಗೆ ಮಾದೇವ ಕನ್ಯೆ ನೋಡ್ರಿ ಅಂದಕೂಡಲೇ ಯಾವ ಜಾತಿಯಲ್ಲಿ ಎಂದು ಕೇಳಿದನು. ಮಾದೇವ ನಾನೂ ಮರಾಠ ಕುಡಿಯಾಗಿದ್ದೇನೆ. ನಾನು ಕುರುಂದವಾಡದ ''ಅಚ್ಯುತರಾವ ಗಾಯಕವಾಡ''ನ ಮಗ 'ಮಾಧವರಾವ ಗಾಯಕವಾಡ' ಎಂದು ಹೇಳಿದನು. ವಾಘಮೋರೆ ಸರಿ, ಆದರೆ ನೀನಾಗಲೇ ಹೊಲೆಯ ಹುಡುಗಿನ ಮಾಡಿಕೊಂಡಿ, ಮಕ್ಕಳನ್ನೂ ಹಡದಿ, ಮೇಲಾಗಿ ೪೦ ವರ್ಷ ವಯಸ್ಸಾಗೇತಿ ಮರಾಠರಲ್ಲ ಹೊಲೆಯ ಹುಡುಗಿಯೂ ಬರಲ್ಲ ಮದುವೆ ಆಗಾಕೆ ಎಂದು ಖಾರವಾಗಿ ಹೇಳಿದರು. ಇತ್ತ ಮಾದೇವನ ಮನಸ್ಸು ಕುದಿಯುತ್ತಿರುವ ಸುಣ್ಣದ ಕುಂಡದಂತೆ ಆಗಿತ್ತು. ತಾನು ಕ್ಷತ್ರಿಯ ಆಗಿದ್ದರೂ ಹೊಲೆಯ ಸಂಸ್ಕೃತಿಯಲ್ಲಿ ಬೆಳೆದದ್ದನ್ನು ನಂಬುತ್ತಿಲ್ಲ. ಆ ಬಾಬ್ಯಾ ಹೊಲೇರಲ್ಲಿಯೇ ಇದ್ದು ತಿಂದು ಕುಡದು ಮಜಾ ಮಾಡುವನು. ಅವನಿಗೆ ಮರಾಠರ ಬಾಬ್ಯಾ ಎಂದು ಹೇಳುವರು. ಸಂಸ್ಕಾರ ಎಂದರೆ ಏನು? ಎಲ್ಲಾ ಬೋಗಸ್ ಜಾತಿಗೂ ಅದಕ್ಕೆ ಸಂಬಂಧವೇ ಇಲ್ಲ. ಆದಾಗ್ಯೂ ಸಮಾಜ ತನ್ನ ಅನುಕೂಲಕ್ಕೆ ತಕ್ಕಂತೆ ಅರ್ಥೈಸುತ್ತದೆ. ಕೋಗಿಲೆ ಕಾಗೆಯ ಬಿಸಿ ಹವೆಯಿಂದ ಹುಟ್ಟಿದರೂ ಅದು ಕಾಗೆಯಾಗದೆ ಕೋಗಿಲೆಯಾಗುತ್ತದೆ. ಅದರಂತೆ ನಾನು ಹೊಲೆಯ ಸಂಸ್ಕೃತಿಯಲ್ಲಿ ಬೆಳೆದರೂ ಕ್ಷತ್ರಿಯನೇ, ಎಂದು ಹೆಮ್ಮೆಯಿಂದ ಹೊರಟ ಮೂಲ ರಾಜ್ಯದ ಹುಡುಕಾಟದಲ್ಲಿ.

ಇತ್ತ ಸುಮತಿ ಅಂವಾ ಇನ್ನೂ ಬರಲಿಲ್ಲ ಇನ್ನು ರಾಜಾದಾಗ ಅದಾನ ಎಂದು ಮುಖದಲ್ಲಿ ಸಪ್ಪಕಳೆ ಮೂಡಿ ನಾನು ಬುದ್ದಿಗೇಡಿ ಅದ್ನಿ, ನಾನ ಸ್ವಲ್ಪ ಸುಧಾರಿಸಿ ಕೊಂಡಿದ್ದರೆ ಇದೆಲ್ಲಾ 'ಲಪಡಾ' ಆಗತಿರಲಿಲ್ಲ, ಇಡೀ ಘಟನೆಯ ತಪ್ಪನ್ನೆಲ್ಲಾ ತನ್ನ ತಲೆ ಮೇಲೆ ಹೊತ್ತುಕೊಂಡು ನಿಸ್ಸಹಾಯಕಳಾಗಿ ಕುಂತಳು. ಅದೇ ರಾತ್ರಿಯಲ್ಲಿ ಯಪ್ಪಾ! ಅನ್ನ ನೀಡ್ರಿ ಎರಡು ದಿನಾ ಆತು ಊಟಮಾಡಿಲ್ಲ ಮಕ್ಕಳು ಎಂದು ಭಿಕ್ಷೆ ಬೇಡಿ ತಿನ್ನುವ ಮತ್ತು ಕಾಮುಕನೊಬ್ಬನು ಅಟ್ಟಿಸಿಕೊಂಡು ಬಂದು ತಬ್ಬಿಕೊಂಡ ಭಯಂಕರ ಘಟನೆ ಕನಸಿನಲ್ಲಿ ಆಗಿದ್ದುದು ಸುಮತಿಗೆ ದಿಕ್ಕು ತಪ್ಪಿದಂತಾಯ್ತು.

ಪ್ರಥಮ ಬಾರಿಗೆ ವಾಘಮೋರೆ ಮಾದೇವನನ್ನು ಕುರಿತು ನಕಾರಾತ್ಮಕವಾಗಿ ಹೇಳಿಕೆ ನೀಡಿದ್ದನು. ತರುವಾಯ ಚವಾಟಗಲ್ಲಿಯ ಮರಾಠ ಜನರು ಮಾದೇವನಿಗೆ ತಿರಸ್ಕಾರ ಮಾಡಿದ್ದರು. ಮೇಲಾಗಿ ಹೆಂಡತಿಯಾದ ಸುಮತಿ ಹೇಳಿದ ಹೇಳಿಕೆ ''ಅಷ್ಟ ಧಿಮಾಕ ಇದ್ರ ಮರಾಠೇರ ಮನೆ ಬಾಡಿಗಿ ಹಿಡಿ ನೋಡೂಣು'' ಎಂಬುದು ನೆನಪಾಗಿ ಮರಾಠೇರ ಗಲ್ಲ್ಯಾಗ ಮನೆ ಕೇಳಿದ. ಅವರು ಜಾತಿ ಮೇಲೆ ಅನುಮಾನ ಪಟ್ಟು ಉದ್ಯಾ ಬಗೂಯೇ (ನಾಳೆ ಬಾ) ಎಂದರು. ಮಾದೇವ ಮಾನಸಿಕವಾಗಿ ನಾನು ಕುರುಂದವಾಡದವ, 'ಕುರುಂದವಾಡಕರ,' ಮಹಾರನಲ್ಲ 'ಮಹಾರ' ಅಲ್ಲ ಎಂದು ಅದೇ ಧ್ಯಾನದಲ್ಲಿಯೇ ಕಿರುಚಿದನು. ಆಗ ರೂಮು ಹುಡುಗ ಓಡಿಬಂದು ''ಕಾಯ್ ಝಾಲವೋ'' ಎಂದ ಅದಕ್ಕೆ ಮಾದೇವ ''ಕಾಹೀ ನ್ಯಾ ಚಲ್'' (ಏನಿಲ್ಲ) ಎಂದನು. ಇದೆಲ್ಲಾ ನೋಡಿದರೆ, ಮಾದೇವ ಮನಸ್ಸನ್ನು ನಿಯಂತ್ರಿಸುವ ಶಕ್ತಿಯನ್ನು ಕಳೋಕೊಂಡಿದ್ದನು.

ಅದೇ ಸಿಟ್ಟಿನಲ್ಲಿ ಮಾದೇವ ಕೊಲ್ಹಾಪುರದಿಂದ ಕುರುಂದವಾಡಕ್ಕೆ ಹೋಗುವ ಎಸ್.ಟಿ. ಬಸ್ಸಿನಲ್ಲಿ ಕುಳಿತು 'ಏಕ ಕುರುಂದವಾಡ' ಎಂದನು. ಬಸ್ಸು ಹಾಗೆ ಮುಂದೆ ನಡೆಯುತ್ತಿರಬೇಕಾದರೆ ಶಿವಾಜಿ ಮೂರ್ತಿ ಕಂಡ ಮಾದೇವ ಶಿವಾಜಿ ಮೂರ್ತಿಯಲ್ಲಿ ಜೀವ ಬಂದಂತಾಗಿ ಶಿವಾಜಿಯೇ ಬಂದು ತಲೆಯ ಮೇಲೆ ಕೈಯಾಡಿಸುತ್ತ ''ಅಳಬೇಡ ಮಗು ನಿನ್ನ ರಕ್ತ ನನ್ನ ವಂಶದ್ದು ತಗೋ ಖಡ್ಗ ನಿನ್ನ ಚಿಕ್ಕಪ್ಪ ಸಂಭಾಜಿಯನ್ನು ಕೊಂದು ಬಿಡು'' ಎಂದು ಹೇಳಿದಂಗಾಯ್ತು. ಅದೇ ಅಮಲಿನಲ್ಲಿ ಮಾದೇವ 'ಜೈ ಶಿವಾಜಿ' 'ಜೈ ಮಹಾರಾಷ್ಟ್ರ' ಎಂದು ಕೂಗಿದನು. ಆಗ ಬಸ್ಸಿನಲ್ಲಿರುವ ಎಲ್ಲರೂ ಇವನನ್ನು ಹುಚ್ಚನಂತೆ ನೋಡಿದರು. ಇಲ್ಲಿ ಪ್ರಾದೇಶಿಕವಾಗಿ ಮರಾಠಿ ಪ್ರಭಾವ ಜಾಸ್ತಿ ಇರುವುದರಿಂದ ಬಸ್ಸಿನಲ್ಲಿದ್ದ ಒಬ್ಬ ''ತುಮ ಬೇಲಗಾಂವಚ್ ಕಾಯ್?'' ''ತುಮಿ ಮಹಾರಾಷ್ಟ್ರ ಏಕೀಕರಣ ಸಮಿತೀಚ್ ಕಾರ್ಯಕರ್ತಕಾಯ್?'' ಎಂದು ಕೇಳಿದನು. ಮಾದೇವ ಹೌದು ನಾನು ಬೆಳಗಾವಿಯವ ಮತ್ತು ಏಕೀಕರಣದಲ್ಲಿ ಭಾಗವಹಿಸಿದ್ದೆ ಎಂದನು. ಮಾದೇವನಿಗೆ ಹೊಲೆಯರಲ್ಲಿ ಇರುವ ಒಗ್ಗಟ್ಟು ಮರಾಠರಲ್ಲಿ ಇಲ್ಲ ಅನ್ನಿಸಿತು.

ಇತ್ತ ಸುಮತಿಯನ್ನು ಅಂಗಡಿಯವ ಏನಮ್ಮ ನಿನ್ನ ಗಂಡ ಬಿಟ್ಟು ಹೋದನಂತೆ ದುಡ್ಡು ಯಾರು ಕಟ್ಟೋರು-? ಎಂದಾಗ ಸುಮತಿ ಆಲೋಚಿಸಿದಳು ಈ ಜನರು ಯಾಕೆ ತಲೆಕೆಡಿಸಿಕೊಂಡಿದ್ದಾರಪ್ಪಾ ನಾನು ನನ್ನ ಗಂಡ ಜಾತಿಯಿಂದ ಬೇರೆ ಬೇರೆ ಅದಕ್ಕೆ ಅವನು ಹೋಗಿದ್ದಾನೆ. ಎರಡು ದಿನ ಮತ್ತೇ ಬಂದೇ ಬರುತ್ತಾನೆ. ಏಕೆಂದರೆ ನಮ್ಮತ್ತಿ ಹೀರಾಬಾಯಿ ನೆನಪಿಗೆ ಬರುತ್ತಾಳೆ. ಹಿಂದೆಯೇ ಎಷ್ಟೋ ಶ್ರೇಷ್ಠರು ಅಂತರ್‌ಜಾತಿ ಮದುವೆಯಾಗಿಲ್ಲವೆ ಅವರೆಲ್ಲ ಚೆನ್ನಾಗಿ ಬಾಳಿಲ್ಲವೇ? ಹಾಗೆಯೇ ನಾವು ಎಂದುಕೊಳ್ಳುತ್ತಾ ಪುನಃ ಮಾದೇವ ನೋಡು ನಾನು ಹೆಂಗಬದುಕುವೆ ಎಂದು ಅಂಗಡಿಗೆ ಹೋಗುವುದು ಬಿಟ್ಟುಬಿಟ್ಟಳು.

ಮಾದೇವ ಬಸ್ಸಿನಲ್ಲಿಯೇ ಎಲ್ಲಾ ದೃಶ್ಯಗಳನ್ನು ಕಾಣಲಾರಂಭಿಸಿದನು. ಕಂಡಕ್ಟರ್ ಯಾರ ಇಳ್ರಿ ಕುರುಂದವಾಡ ಅಂದಂಗಾಗಿ ಮಾದೇವ ಸೀದಾ ಆಸ್ಥಾನಕ್ಕೆ ಹೋದಂಗಾಗಿ ಸಂಭಾಜಿರಾವನ ಹಿಡಿದು ಕತ್ತು ಹಿಸುಕುವ ಕನಸು ಆರಂಭವಾಯ್ತು. ಅವನ ಕೈಯಲ್ಲಿ ಖಡ್ಗವಿರಲಿಲ್ಲ ಮುಷ್ಟಿ ಬಿಗಿಯಾಗಿಟ್ಟುಕೊಂಡಿದ್ದನ್ನು ಪ್ರಯಾಣಿಕರು ಗಮನಿಸಿದರು. ಅವನು ಸಂಭಾಜಿರಾವನನ್ನು ಬೈಯುತ್ತಾ ಸಾಯಿಸಲು ಚೀರಾಡಿದನು. ಇತ್ತ ತಡೆದು ಸಾಕಾಗಿದ್ದ ಪ್ರಯಾಣಿಕರಿಗೆ ಇವನ ಮೇಲೆ ತುಂಬಾ ಕೋಪ ಬಂದಿತು. ಡ್ರೈವರ್ ಸಿಟ್ಟಿನಿಂದ ಕಂಡಕ್ಟರಿಗೆ ''ತುಮ್ಹಾಲಾ ಅಕಲ್ ನಾಹಿ, ಖುಳ್ಯಾ ಲೋಕಾಲಾ ಪಣ ಆತ ಘೇತಾ'' (ನಿಮಗೆ ಬುದ್ದಿಯಿಲ್ಲ ಹುಚ್ಚರನ್ನು ಬಸ್ಸಿನಲ್ಲಿ ಹಾಕಿಕೊಳ್ಳುತ್ತೀರಿ) ಎಂದನು. ಪ್ರಯಾಣಿಕರು ಇಲ್ಲೇ ಇಳಿಸಿರಿ ಅಂದರು ಮಾದೇವ ಇಲ್ಲ ಇಲ್ಲ ತಪ್ಪಾಯ್ತು ಈ ತರ ಮಾಡಲ್ಲ ಎಂದು ಬೇಡಿಕೊಂಡನು. ಅಂತು ಇಂತು ಮಾದೇವ ಕುರುಂದವಾಡ ಬಸ್‌ಸ್ಟ್ಯಾಂಡ ತಲುಪಿ ತಿಂಡಿ ತಿಂದು ನಾನಾ ಸಾಹೇಬನ ಪತ್ತೆ ಹಚ್ಚುವುದು ಹೇಗೆ ಎಂಬ ಯೋಚನೆಯಿಂದ ಒಬ್ಬ 'ಪಾನ್‌ಶಾಪ' ವ್ಯಕ್ತಿನ ಕೇಳಿದಾಗ ಅವನು ಅರ್ಜುನ ಕಾರಾಡಕರ್ ಅಂತ್ಹೇಳಿ ಒಬ್ಬ ಹಮಾಲಿ ಇದ್ದಾನಾ ಅವನಿಗೆ ಗೊತ್ತಿರಬಹುದು. ಅರ್ಜುನ ಬಂದೇ ಬಿಟ್ಟ.

ಮಾದೇವನು ಪುನಃ ಇಲ್ಲಿ ನಾನಾಸಾಹೇಬ ಗೊತ್ತೇನ್ರಿ ಎಂದು ಕೇಳಿದಕ್ಕೆ ಪೂರಕ ಮಾಹಿತಿ ನೀಡಿದನು. ಅವನು ಕಾಕಾ ಸಾಹೇಬ ಅನ್ನೋ ವ್ಯಕ್ತಿನ ಸಂಪರ್ಕಿಸಿದರೆ ಎಲ್ಲಾ ಗೊತ್ತಾಗುತ್ತೆ ಎಂದು ಹೇಳಿದನು.

ಕಾಕಾಸಾಹೇಬ ಬಂದ ತಕ್ಷಣ ಅರ್ಜುನ ಕರಾಡಕರ್ ಇದ್ದು ''ನಿಮಗ ನಾನಾಸಾಹೇಬ ಕರಾಡಕರ ಗೊತ್ತೆ?'' ಎಂದಾಗ ಹೌದು ಗೊತ್ತು ಅವನು ನನಗೆ ಚಿಕ್ಕಪ್ಪ ಆಗುವನು. ಎಂದು ಹೇಳಿದಾಗ ಮಾದೇವನಿಗೆ ಒಳಗೆ ಆನಂದವಾಯ್ತು. ನಾನಾಸುಹೇಬ ಎಲ್ಲಿದ್ದಾನೆ ಎಂದು ಕೇಳಿದಾಗ ಅವನು ಸತ್ತು ಬಹಳ ವರ್ಷಗಳಾದವು ಅಂದನು ಮಾದೇವ ಆಗ ನಿರಾಶೆಯಾದನು. ಏಕೆಂದರೆ ಅವನೊಬ್ಬನೇ ಮುಖ್ಯ ಸಾಕ್ಷಿಯಾಗಿದ್ದನು ಮುಂದೆ ಸಂಭಾಜಿರಾವ ಬಗ್ಗೆ ಗೊತ್ತಾ? ಎಂದಾಗ ಕಾಕಾಸಾಹೇಬ ಅವನಪ್ಪ ಅವನ ಹೆಸರೇ ಎತ್ತಬೇಡಿ ಸ್ವಂತ ಅಣ್ಣ, ಅತ್ತಿಗೆಯನ್ನು ಸಾಯಿಸಿದ್ದಲ್ಲದೇ ಒಂದು ಮಗು (ಹಸುಗೂಸು) ಅದನ್ನು ಸಾಯಿಸಿದ ಎಂದು ಕಾಕಸಾಹೇಬ ಹೇಳುತ್ತಾ ಮಾದೇವನಿಗೆ ಹೌದು ಇಷ್ಟೆಲ್ಲಾ ಕೇಳಿದಿ ನೀನ್ಯಾರು? ಎಂದನು. ಮಾದೇವನು ಸಹ ಆಂತರಿಕವಾಗಿ ಯೋಚನೆಗೀಡಾಗಿ ನನ್ನನ್ನು ಸತ್ತಿದ್ದಾನೆ ಎಂದು ತಿಳಿದಿದ್ದಾರೆ. ನಾನೇ ಆ ಕೂಸು ಅಂದರೆ ನಂಬುವರೆ? ಎಂದು ವಿಚಾರಿಸಿ ಕೊನೆಗೆ ಧೈರ್ಯಮಾಡಿ ಆ ಕೂಸು ನಾನೇ. ನಾನಾಸಾಹೇಬ ಹೊಲಗೇರಿಯಲ್ಲಿ ಬಿಟ್ಟು ಹೋಗಿದ್ದಾನೆ ಬೇಕಾದರೆ ನನ್ನ ತಂದೆತಾಯಿಯ ಹೋಲಿಕೆ ಗಮನಿಸಿರಿ ಎಂದನು. ಮಾದೇವ ನಾನೇ ಆ ಕೂಸು ಎಂದದ್ದು ಕೇಳಿ ಕಾಕಾಸಾಹೇಬನಿಗೆ ಮನಸ್ಸು ಹೌದು ಅವನೇ ಇವನು ಎಂದಿತು. ಅರ್ಜುನರಾವ ಕರಾಡಕರನಿಗೆ ರಾಜೇವಾಡಕ್ಕೆ ಹೋಗಿ ತೋರಿಸು ಎಂದ. ಅದೇ ಪ್ರಕಾರ ಕರಾಡಕರ ರಾಜೇವಾಡಕ್ಕೆ ಕರಕೊಂಡು ಬಂದು ''ಆಹೋ! ಮಾಯೀ ಸಾಹೇಬ!'' ಎಂದನು. ಒಳಗಿಂದಲೇ ಮಾದೇವನ ಸೋದರತ್ತೆ 'ಕೋನ್ರೇ' ಎಂದು ಗಟ್ಟಿಯಾಗಿ ಕೇಳಿದಳು. ಅರ್ಜುನರಾವ ಕರಾಡಕರ 'ಇವನು ನಿಮ್ಮ ಅಣ್ಣನ ಮಗ ಅಂತೆ' ಎಂದನು. ಅಹಲ್ಯಾಬಾಯಿ ಬಂದು ನೋಡಿದಳು ಮಾದೇವ 'ನೀನಾವನ್ನೇ ಸುಮ್ಮನೇ ಈತರ ಅಂದರೆ ರಾಜ್ಯದ ಭಾಗ ಬರುತ್ತೆ ಅಂತೇಳಿ ತಿಳಿದಿಯಾ? ಹೋಗಲೇ' ಎನ್ನುವಳು ಎಂದು ಭಾವಿಸಿಕೊಂಡಿದ್ದ. ಆದರೆ ಸೋದರತ್ತೆ ಅಹಲ್ಯಾಬಾಯಿ ದೀರ್ಘವಾಗಿ ನೋಡಿ ಹೋಲಿಕಿ ಅದೇ ತರಹ ಇದೆ ಒಳಗೆ ಕರೆದು ಕೂಡಿಸಿದಳು. ಮನಸ್ಸಿನೊಳಗೆ 'ನೀನು ನಮ್ಮವನೇ ಅಂದರೆ ಆಸ್ತಿಯಲ್ಲಿ ಪಾಲು ಕೇಳಿದರೆ ಹೇಗೆ' ಎಂದು ಗೊಂದಲಕ್ಕೆ ಈಡಾದಳು. ಮಾದೇವನು ತನ್ನ ಕಥೆಯನ್ನೆಲ್ಲ ಹೇಳಿದ. ಅಹಲ್ಯಾಬಾಯಿ ಹೌದು ನೀನು ಮೊದಲೇ ಗೊತ್ತಾಗಿದ್ದರೆ ನನ್ನ ಮಗಳನ್ನೇ ಕೊಟ್ಟು ಮದುವೆ ಮಾಡಿ ಸುಖವಾಗಿ ಇರುತ್ತಿದ್ದೆವು ಅಂದಕೊಂಡಳು.

ಮಾದೇವ ಜಾತಿಯಿಂದ ಸಮಾಜದಲ್ಲಿ ಹೀನವಾಗಿ ಕಂಡಿದ್ದರೂ ನನಗೇನು ಬೆಳಗಾವಿಯೊಳಗ ಕಡಿಮೆ ಇಲ್ಲ ಎಂದನು. ಒಳಗಿನ ಆತುರ ತಡೆಯದೇ ನಾನು 'ಹೊಲೆಯ'ನಲ್ಲ 'ಮರಾಠ' ಅಂತ ಒಂದೇ ಮಾತ ಅಂದರೆ ಸಾಕು ಅಂತ ನಿನ್ನ ಹುಡುಕಿಕೊಂಡು ಬಂದೆ ನನ್ನವರು ಅನ್ನುವವರು ಯಾರಿದ್ದಾರೆ? ನೀನಾದರೂ ಒಬ್ಬಳು ಇದ್ದಿಯಾ. ಅದು ನನ್ನ ಭಾಗ್ಯ, ನನ್ನದೊಂದೇ ಆಶೆ ನಮ್ಮಪ್ಪಮ್ಮರ ಫೋಟೋ ಇದ್ರ್ರೆ ತೋರಸ್ರಿ ಕಣ್ತುಂಬ ನೋಡ್ತಿನಿ ಎಂದು ಭಾರವಾದ ಧ್ವನಿಯಲ್ಲಿ ಕೇಳಿದನು. ಅದೇ

ದುಃಖದಲ್ಲಿ ಅತ್ತಿ ಅಹಲ್ಯಾಬಾಯಿ ಒಳಗೆ ಹೋಗಿ ಫೋಟೋ ತರುದಕ್ಕಿಂತ ಮುಂಚೆ, ಇವನಿಗೇಕೆ ಇಷ್ಟು ಪ್ರೀತಿ ತಂದೆತಾಯಿ ಮೇಲೆ, ನಾನು ಬೆಳಸಿದ ಸಾಕಿದ ನನ್ನ ಮಕ್ಕಳೇ ಒಂದು ದಿನ ಬಂದಿಲ್ಲ. ಹೊಲಗೇರಿಯ ಪ್ರೀತಿ ಇಷ್ಟು ದೊಡ್ಡದಾ ಅಂದುಕೊಂಡು ಫೋಟೋ ತಂದಳು. ಮಾದೇವ ಹೋದ ಜೀವ ಮರಳಿ ಬಂದಂತೆ ಫೋಟೋವನ್ನು ಕಣ್ಣಿಗೆ ಒತ್ತಿಕೊಂಡನು. ಆ ಪ್ರೀತಿ ಕಂಡ ಅತ್ತೆ ಫೋಟೋ ನೀನೇ ತಗೋ ಅಂದಳು. ಅತ್ತೆಗೆ ಒಳಗೆ 'ರಾಜಕುಡಿ ಹೋಗಿ 'ಹೊಲೆಯ' ಆದನಲ್ಲ ಎಂಬ ನೋವು ಇತ್ತು. ಮಾದೇವನು ಸಹ ಅತ್ತೆಯ ನೆನಪಿಗಾಗಿ ತನ್ನ ಉಂಗುರವನ್ನು ತೆಗೆದು ಅತ್ತೆಯ ಬೆರಳಿಗೆ ಹಾಕಿ ನಮಸ್ಕರಿಸಿ ಸೀದಾ ಕೊಲ್ಹಾಪುರ ಬಸ್ಸು ಹತ್ತಿದ. ದನಕರುಗಳು ಹಗಲೆಲ್ಲ ತಿರುಗಾಡಿ ಸಾಯಾಂಕಾಲ ಸೀದಾ ಮನೆಗೆ ಹೇಗೆ ಬರುತ್ತವೆಯೋ ಹಾಗೆ. ಮಾನಸಿಕವಾಗಿ ಮನುಷ್ಯನಿಗೆ ಎಷ್ಟು ತೊಂದರೆಗಳು, ಸಹಿಸಲಾರದ ಕಷ್ಟಗಳು ನೋವುಗಳು, ವೇದನೆಗಳು ಏನೇ ಇರಲಿ ಅವೆಲ್ಲವುಗಳಿಂದ ಹೊಟ್ಟೆಗೆ ಏನು ಹಾಕಿಕೊಳ್ಳದೇ ಇರಲು ಸಾಧ್ಯವೇ ಇಲ್ಲ ಅದಕ್ಕೆ ಸುಮತಿ ಈಗಾಗಲೇ ಅಂಗಡಿಯವನನ್ನು ಬಿಟ್ಟು ಸ್ವಂತ ದುಡಕೊಂಡು ಜೀವಿಸಬೇಕು ಎಂದುಕೊಂಡಿದ್ದಳು. ಅದೇ ಸಾಯಂಕಾಲ ರಾಮಕ್ಕ ಕಾಶವ್ವ ಮನೆ ಮುಂದೆ ಕೆಲಸ ಮುಗಿಸಿಕೊಂಡು ಬರಬೇಕಾದರೆ ''ಏ ರಾಮಕ್ಕ ನಾನು ಕೆಲಸಕ್ಕೆ ಬರಲೆ ಎಂದಳು. ರಾಮಕ್ಕ ನೋಡವ್ವಾ ನಿನ್ನ ಕೈಲೆ ಆಗುತ್ತಾ? ಅಂದಳು ಆದರೂ ಇಲ್ಲವ್ವ ನಾನು ಬರತೀನಿ ಅಂತೇಳಿ ದುಡಿಯಲು ದಿನಾಲು ಹೋಗುತ್ತಿದ್ದಳು. ಅದೇ ದುಡ್ಡಿನಿಂದ ಧೈರ್ಯದಿಂದ ಮರ್ಯಾದೆಯಿಂದ ಗರ್ವದಿಂದ ಬದುಕುತ್ತಿದ್ದಳು. ಇದನ್ನು ಗಮನಿಸಿದ ಕೇರಿಯ ಕಿರಿಹಿರಿಯರೆಲ್ಲರೂ ''ನೋಡು ಹಿಂಗಿರಬೇಕು ಹುಡುಗಿ ಅಂದರೆ, ಮಗಳ ಬಿಸುಲ ಅನ್ನದೆ ದಿನಾಲೂ ಕೆಲಸಕ್ಕೆ ಹೋಗ್ತಾಳ ಗಂಡನ ಆಶೆಯಿಲ್ಲದೆ, ಹಡದ್ರ ಇಂಥ ಮಕ್ಕಳ್ನಾ ಹಡಿಬೇಕು'' ಎಂದು ಸುಮತಿಯನ್ನು ಗೌರವದಿಂದ ನೋಡುತ್ತಿದ್ದರು.

ಮಾದೇವನಿಗೆ ಜನ್ಮರಹಸ್ಯ ಹೇಳಿ ಸುಮತಿಯಿಂದ ಬಿಡಿಸಿದ ತುಳಸಿ ಮತ್ತು ವಿಮಲಿ ಇಬ್ಬರೂ ಸುಮತಿಯ ಕಷ್ಟ ನೋಡಿ ಆನಂದಪಡುತ್ತಿದ್ದರು. ಮರಾಠರ ಬಾಬ್ಯಾ ಮತ್ತೆ ಕೇರಿಯೊಳಗೆ ಬರಲಾರಂಭಿಸಿದನು. ಸುಮತಿಯನ್ನು ನೋಡಿ ಕೆಣಕಲು ಆರಂಭಿಸಿದ್ದ ಅಷ್ಟೊತ್ತಿಗೆ ಬದುಕೆಲ್ಲಾ ಹಾಳಾಗಿದ್ದು ಒಂದು ಚಿಂತೆ, ನಡುವೆ ಇವನ ಕಿರಿಕಿರಿತಾಳದೇ ಸೀದಾ ಎದ್ದು ''ಯಾಕೋ ಬಾಡ್ಯಾ ನನ್ನೂ ಏನ ಅಗ್ಗದ ಹೆಂಗ್ಸಂತ ತಿಳಿದಿ'' ಎಂದು ಕೈಯಲ್ಲಿಯ ಕೊಡದಿಂದಲೇ ಒನಕಿ ಓಬವ್ವಳಂತೆ ಮುಖಕ್ಕೆ ತಲೆಗೆ ಹೊಡೆದಳು. ಕೇರಿಯ ರಾವಕ್ಯಾ, ಪರಿಶ್ಯಾ, ಖಂಡೋಬಾ, ಕರಿಯಪ್ಪಜ್ಜ, ರಾಮಕ್ಕ, ಕಾಶಕ್ಕ, ಅನೇಕರು ಒಗ್ಗಟ್ಟಾಗಿ ತುಳಸಿ ವಿಮಲಿಯನ್ನು ಹೊಲಗೇರಿಯಿಂದ ಹೊರಹಾಕಲು ತೀರ್ಮಾನಿಸಿದರು. ಇದರಿಂದ ಸುಮತಿಗೆ ಎಲ್ಲರ ಸಹಕಾರದಿಂದಾಗಿ ಒಂದು ಧೈರ್ಯಬಂತು ಮನಸ್ಸಿನಲ್ಲಿ ಗಂಡನಿಗೆ ನೀ ಎಲ್ಲೇ ಹೋಗು ನಾ ಬದುಕುವೆ ಅಂದುಕೊಂಡಳು.

ಕುರುಂದವಾಡ ಹುಡುಕಿಕೊಂಡು ಹೋಗಿದ್ದ ಮಾದೇವ ತಂದೆ ತಾಯಿಯರ ಫೋಟೋ ಸಿಕ್ಕ ಕೂಡಲೇ ಎಲ್ಲಿಲ್ಲದ ಆನಂದ ಲಹರಿಯಲ್ಲಿ ತೇಲಿದಂತಾಗಿದ್ದ. ಬಸ್ಸಿನಲ್ಲಿ ಕುಳಿತು ಕುರುಂದವಾಡದಿಂದ ಕೋಲ್ಹಾಪುರ

ಬಸ್ಸು ಟಿಕೇಟು ಪಡೆದ ಮೇಲೆ ಅವನಿಗೆ ಅರಿವಾಗಿ ನಾನೆಲ್ಲಿಗೆ ಹೋಗಬೇಕು ಎಂಬ ದ್ವಂದ್ವ ಮನಸ್ಸಿನಲ್ಲಿ ಉಂಟಾಯ್ತು. ಮಾದೇವನಿಗೆ ಎರಡು ರೀತಿಯ ಮನಸ್ಸುಗಳು ಹುಟ್ಟಿಕೊಂಡವು. ಒಂದು ಮನಸ್ಸು ಹೌದು ನೀನು ಕುರುಂದವಾಡದವ ಅಲ್ಲಿ ಯಾರಿದ್ದಾರೆ ಬೆಳಗಾವಿಯಲ್ಲಾದರೂ ಯಾರಿದ್ದಾರೆ? ನಿನ್ನ ಹೆಂಡತಿ ಮಕ್ಕಳು (ಜಾನೂ, ಅಂಬಾ) ಇಲ್ಲವೆ ಅಲ್ಲಿಗೆ ಹೋಗು ಎಂದಿತು. ಇನ್ನೊಂದು ಮನಸ್ಸು ಮೂಲ ಹುಡುಕಿಕೊಂಡು ಬಂದು ಮರಳಿ ಅಲ್ಲಿಗೇಕೆ? ನೀನು ಹೊಲೆಯನಲ್ಲ ಅದೇಗೆ ಸಾಧ್ಯ ಎಂದಿತು.

ಒಂದು ಮನಸ್ಸು ನಿನ್ನ ಸೋದರತ್ತೆಯಂತಿಯಲ್ಲ ಆಕೆ ಯಾಕೆ ನಿನ್ನ ಉಳಿಸಿಕೊಳ್ಳಲಿಲ್ಲ. ಯಾಕೆ ಬೀಳ್ಕೊಟ್ಟಳು? ಮೇಲಾಗಿ ಅವರ ಜೀವನ ಹೇಗಿದೆ ಎಲ್ಲಾ ಹೀನಾಯವಾಗಿದೆ. ಇದ್ದ ಇಬ್ಬರು ಮಕ್ಕಳು ಮುಖಕ್ಕಿಲ್ಲದಂಗೆ ಇದ್ದಾರೆ ಎಂದಿತು. ಇನ್ನೊಂದು ಮನಸ್ಸು ಈ ರಾಜ್ಯಗಳೆಲ್ಲ ಏಕೆ ನಾಶವಾದವು, ನಮ್ಮಪ್ಪ ಸತ್ತಿದ್ದಕ್ಕೆ? ನಾನು ಹೊಲಗೇರಿ ಸೇರಿದ್ದಕ್ಕೆ? ಅದು ಇರಲಿ, ಹಿಂದೆ ಆಳಿದ ಅಶೋಕ, ಅಲೆಗ್ಸಾಂಡರ್, ಅಕ್ಬರ್, ಔರಂಗಜೇಬ ಮತ್ತು ನೆಪೋಲಿಯನ್ ಬೋನಾಪಾರ್ಟ್ ರಾಜ್ಯಗಳೆಲ್ಲ ಏಕೆ ಹಾಳಾದವು ಎಂದು ವಿಚಾರಿಸಿದಾಗ ಎಲ್ಲವೂ 'ನಶ್ವರ' 'ಅಶಾಶ್ವತ' ಎಂಬ ಅರಿವು ಮೂಡಿತು. ಬುದ್ಧನ ಬೋಧನೆ ನೆನಪಾಗಿ ಪ್ರಜೆಗಳೇ ಪ್ರಭುಗಳು! ಎಂಬ ವಿಚಾರ ಬಂದಾಗ ನಾವು ಪ್ರಜೆಗಳೇ ಎಂದು ಪ್ರಶ್ನೆ ಹಾಕಿಕೊಂಡ. ಹೌದು ನೀನು ಪ್ರಜೆಯೇ ಪ್ರಜೆಯೆಂದು ಗುರ್ತಿಸಿದ್ದಕ್ಕೆ ನೌಕರಿ ಪಡೆದಿದ್ದೀಯಾ ಎಂದು ಮನಸ್ಸು ಹೇಳಿತು.

ನಿಧಾನವಾಗಿ ಮಾದೇವನ ಮನಸ್ಸು ಹೊಲಗೇರಿಯ ಮೊದಲಿನ ವಿಶ್ವಾಸಕ್ಕೆ ತಿರುಗುತ್ತಾ ಬಂದಿತು. ನಾನು ಹೊಲೆಯನಾದ್ದರಿಂದಲೇ ಎಲ್ಲರ ಕಪಿಮುಷ್ಟಿಯಿಂದ ಪಾರಾಗಿದ್ದೇನೆ ಅನ್ನಿಸಿತು. ಕೊಲ್ಲಾಪುರದ ಬಸ್ ಸ್ಟಾಪ್‌ನಲ್ಲಿ ಕುಳಿತಿದ್ದ ಮಾದೇವ ಪುನಃ ತಂದೆ-ತಾಯಿಯರ ಫೋಟೋ ನೋಡಬೇಕಾದರೆ, ಅಲ್ಲಿ ಜಾನೂಬಾ ಮತ್ತು ಹೀರಾಬಾಯಿ ಮುಖಗಳು ಕಂಡವು. ಮನಸ್ಸು ನಿನ್ನ ತಂದೆ ತಾಯಿ ಹೆಚ್ಚೋ ನಿನ್ನ ಸಾಕಿದವರು ಹೆಚ್ಚೋ ಎಂದು ಕೇಳಿತು. ತಂದೆ ತಾಯಿಯರ ಜಾಗದಲ್ಲಿ ಸಾಕಿದ ಜಾನೂಬಾ ಹೀರಾಬಾಯಿ ಬಂದರು. ಮಾದೇವ ಮನಸ್ಸಿನೊಳಗೆ ಹೆಂಡತಿ ಮಕ್ಕಳು ಹೇಗಿದ್ದಾರೋ, ಕೇರಿಯ ರಾವಶ್ಯ ಪರಿಶ್ಯಾ ಖಂಡೋಬಾ ಹೇಗಿದ್ದಾರೋ ಅಂದುಕೊಂಡು ಕೊಲ್ಲಾಪುರದಿಂದ ಬೆಳಗಾವಿಗೆ ಬರಲು ಬಸ್ಸುಗಳು ರದ್ದಾಗಿದ್ದವು ಅದಕ್ಕೆ ರೈಲುಗಾಡಿಗೆ ಬರಲು ಸ್ಟೇಷನ್‌ಗೆ ಬಂದನು. ಅಲ್ಲಿಯೇ ಮನಸ್ಸು ತುಂಬಾ ಪರಿವರ್ತನೆ ಆಯಿತು. ಅದು ಒಬ್ಬ ಹೆಣ್ಣುಮಗಳು ಕೂಸನ್ನು ಅನಾಥವಾಗಿ ಬಿಟ್ಟು ಅಕ್ರಮ ಸಂಬಂಧವನ್ನು ಇಟ್ಟುಕೊಂಡು ಜೀವಿಸುವುದು ನೋಡಿ ಸುಮತಿಯೇ ನೆನಪಾದಳು.

ಕೊಲ್ಲಾಪುರದಿಂದ ಬೆಳಗಾವಿಗೆ ಹೋಗಲು ನಿರ್ಧರಿಸಿ, ಮಹಾಲಕ್ಷ್ಮಿ ಎಕ್ಸಪ್ರೆಸ್ ಗಾಡಿಗೆ ೨.೩೦ ಕ್ಕೆ ಕುಳಿತನು. ದಿಡೀರನೇ ಗುಂಪೊಂದು ಬಂದು ಎಲ್ಲಾ ಬೋಗಿಗಳಲ್ಲಿ ಸೇರಿದರು. ಸಾಕಷ್ಟು ಗದ್ದಲ ಮಾಡಿದರು ಏಕೆಂದರೆ ಬಾಬಾ ಸಾಹೇಬರ ''ಹಿಂದೂ ಧರ್ಮದ ಒಗಟುಗಳು'' ಎಂಬ ಪುಸ್ತಕವನ್ನು ಸರ್ಕಾರ ನಿಷೇದಿಸಿದ್ದರಿಂದ ಎಲ್ಲಾ ಊರಿನ ದಲಿತರು ಒಕ್ಕಟ್ಟಾಗಿ ಪ್ರತಿಭಟನೆ ಮಾಡಲು ಬಂದಿದ್ದರು.

ಅದರಲ್ಲಿ ವಿಶೇಷವಾಗಿ ಪ್ರೊ. ಕದಂ ಎನ್ನುವವರೇ ಅಧ್ಯಕ್ಷರಾಗಿದ್ದರು. ಶಿವಾಜಿ ಪೀಠದ ಪ್ರಾಧ್ಯಾಪಕರೂ ಆಗಿದ್ದರು. ಶಿವಾಜಿ, ಅಂಬೇಡ್ಕರ, ಜ್ಯೋತಿಭಾಪುಲೆ ಮತ್ತು ಶಾಹೂ ಮಹಾರಾಜ ಇವರೆಲ್ಲರೂ ಒಂದೇ ಮನಸ್ಕರು ಆಗಿದ್ದರು. ಇವರನ್ನು ಬಳಸಿಕೊಂಡು ಬೇರೆ ಬೇರೆ ವರ್ಗಗಳಾಗಿ ಮಾಡಿದ್ದು ಮರಾಠರು. ಮರಾಠ ಸಮುದಾಯ ಎಂದು ಬೈಯುತ್ತಿದ್ದರು. ಪಕ್ಕದಲ್ಲಿಯೇ ಕುಂತಿರುವ ಮಾದೇವನನ್ನು ಕಂಡು ಪ್ರೊ.ಕದಂ ಅವರು ನೀನ್ಯಾರು? ನಿನ್ನ ಹೆಸರೇನು? ಅಂದಾಗ ಮಾದೇವ ಯಾವಜಾತಿ ಹೇಳಬೇಕು ಎಂಬ ಗೊಂದಲದಿಂದ ನಿಧಾನವಾಗಿ ಮರಾಠರ ಪೈಕಿ ಅಂದ ಕೂಡಲೇ ಕದಂ ಅವರು ತಿರುಗಿ ''ನಿಮಗೆ ಜಾತಿ ಅಭಿಮಾನ ಅಲ್ಲಅದು ದುರಭಿಮಾನ! ನೀವು ಮನುಷ್ಯರನ್ನು ನಾಯಿಗಿಂತ ಕಡೀ ಆಗಿ ಕಾಣ್ತೀರಿ ನಮ್ಮ ಮ್ಯಾಗ ಕಟ್ಟಳೆ ಹೆರ್ತೀರಿ'' ಎಂದು ರೇಗಾಡಿದನು. ಅಷ್ಟರಲ್ಲಿ ಮೀರಜ ಬಂದಂಗಾಯ್ತು ಮಾದೇವ, ಸರ್ ನಾನು ಬರ್ತೀನಿ ಎಂದು ಕೆಳಗಿಳಿದನು.

ಮೀರಜ ಪ್ಲಾಟಫಾರಂ ಬೆಂಚ ಮೇಲೆ ಕುಳಿತಿರಬೇಕಾದರೆ ಅಲ್ಲಿಯೂ ಒಂದು ದಲಿತ ಗುಂಪು ಪ್ರತಿಭಟನೆಗೆ ಹೋಗಲು ರೈಲು ಹತ್ತಲು ಪ್ರಯತ್ನಿಸುತ್ತಿದ್ದರು. ಇದನ್ನು ಕಂಡ ಮಾದೇವನಿಗೆ ದಲಿತರು ಓದಲು ಬರೆಯಲು ಬರದೇ ಇದ್ದರೂ ಎಂಥಾ ಅನ್ಯೋನ್ಯತೆ ಒಕ್ಕಟ್ಟು ಎಂದು ಹೊಗಳಿದನು. ರೈಲು ಹೊಂಟಿತು ಫ್ಲಾಟಫಾರಂ ಬಿಕೋ ಅನಿಸಿತು. ಅದೇ ಸ್ಟೇಷನ್‌ನಲ್ಲಿ ಒಬ್ಬಳು ಮಗುವನ್ನು ಅನಾಥವಾಗಿ ಬಿಟ್ಟು ಇನ್ನೊಬ್ಬನೊಂದಿಗೆ ಅಕ್ರಮಸಂಬಂಧವನ್ನು ಇಟ್ಟುಕೊಂಡು ಜೀವಿಸುವದು ಕಂಡು ಮಾದೇವನಿಗೆ ತಕ್ಷಣ ಹೆಂಡತಿ ಮಕ್ಕಳು ನೆನಪಾಗಿ ನಾನು ಅದೇ ತರಹ ಬಿಟ್ಟನೇನೋ ಸುಮತಿಗೆ ಅಲ್ಲಿ ಎಷ್ಟು ಜನರು ಬಾಬ್ಯಾನೊಂದಿಗೆ ಸೇರಿಕೊಂಡಿದ್ದಾರೋ ಎಂದು ದಿಗಿಲು ಬಡಿದು ಸೀದಾ ಕುರುಂದಾವಡಕ್ಕೆ ಹೋಗಬೇಕು ಅನಿಸಿತು. ಮನಸ್ಸು ಗೊತ್ತಿಲ್ಲದೆಯೇ ಕ್ರಿಯಾಶೀಲವಾಗಿತ್ತು. ಏಕೆಂದರೆ ಅನ್ನ ತಿಂದ, ಪ್ರೀತಿ ಕಂಡ, ಕರುಳು ಯಾವುದನ್ನೂ ಲೆಕ್ಕಿಸಲ್ಲ ಅದಕ್ಕೆ ಮಾದೇವನ ಮನಸ್ಸು ನನಗೆ ನನ್ನ ಹೆಂಡತಿ ಮಕ್ಕಳು ಬೇಕು, ನನ್ನ ಕೇರಿಯ ಕಿರಿ ಹಿರಿಯರು ಬೇಕು, ನನ್ನ ಕೇರಿ ಹೊಲಗೇರಿಯೇ ಆಗಬೇಕು ಅಲ್ಲಿನ ಪ್ರೀತಿ ಪ್ರೇಮ ವಾತ್ಸಲ್ಯ ಬೇಕು ಎಂದು ಚೀರಾಡಿತು.

ರೈಲು ಮೀರಜದಿಂದ ಸಾಂಬ್ರ ತಲುಪಿದ ಕೂಡಲೇ ಮನಸ್ಸು ಇನ್ನೂ ಚಡಪಡಿಸಿತು. ತೊಡೆಯ ಮೇಲಿಟ್ಟುಕೊಂಡ ತಂದೆ ತಾಯಿಯರ ಫೋಟೋ ಯಾವ ಲೆಕ್ಕಕ್ಕೆ ಬರಲೇ ಇಲ್ಲ. ಅಲ್ಲಿ ಹೆಂಡತಿ ಮಕ್ಕಳು ಮತ್ತು ಹೊಲಗೇರಿ ಅಷ್ಟೇ ಮುಖ್ಯವಾಗಿತ್ತು. ತಾನು ಸಂಪೂರ್ಣವಾಗಿ ಸೋತಿದ್ದನು. ಹೊಲಗೇರಿ ಜಾನೂಬಾ ಹೀರಾಬಾಯಿ ರಾಜನನ್ನಾಗಿಸಲಿಲ್ಲ ಆದರೆ ಒಬ್ಬನಾಗರಿಕನನ್ನಾಗಿಸಿದ್ದಾರೆ ಮನುಷ್ಯನನ್ನಾಗಿಸಿದ್ದಾರೆ. ಅದು ಸಾಕು ಎಂಬ ಮಾತು ಅವನ ಮನದಲ್ಲಿ ಮೂಡಿತ್ತು. ಸಾಂಬ್ರದಿಂದ ಆಟೋ ಅತ್ತಿದ ಮೇಲೆ ತನಗೆ ಗೊತ್ತಾಗದಂತೆಯೇ ನಾಲಿಗೆ ''ವಡಗಾಂವ ಮಹಾರವಾಡ'' ಎಂದಿತು. ಇದರಿಂದ ಅವನ ಮೇಲೆ ಇಟ್ಟ ಸಮುದಾಯ ಪ್ರೀತಿ ಎಂಥದ್ದುಎಂದು ಗೊತ್ತಾಗುತ್ತದೆ. ಹೌದು ನಾವು ಎಷ್ಟೇ ದೂರವಿದ್ದರೂ ಮಾನಸಿಕವಾಗಿ ಮನಸ್ಸು ಹತ್ತಿರವಿರುತ್ತದೆ.

ಮನೆಗೆ ಬಂದವನೇ ತಡ ಅಂಬೇಡ್ಕರ ಫೋಟೋ ಕೇಳಿ ತೊಳೆದು ಸೈಕಲಿನ ಮೇಲೆ ಇಟ್ಟು ಮಕ್ಕಳಿಗೆ ಸ್ನಾನ ಮಾಡಿಸಿ ತಯಾರು ಮಾಡುವ ಕಲ್ಪನೆಯಲ್ಲಿ ಮಗಳು (ಅಂಬಾ) ಬಾಬಾ ನೀನು ನಿನ್ನ ಜಾತ್ಯೇಕಿನ ಮದುವೆ ಆದೆಯಾ, ಅಂಬೇಡ್ಕರ ಫೋಟೋ ಏನು ಮಾಡ್ತಿಯಾ ಎಂದು ಕೇಳಿದಾಗ ಮಾದೇವನಿಗೆ ಆಂತರಿಕವಾಗಿ ತಡೆಯಲಾರದಷ್ಟು ದುಃಖ ಬಂದರೂ ಹೊರಗೆ ಹಾಕದೇ ಇಲ್ಲ ನಾವೆಲ್ಲ ಒಂದೇ, ಅದೆಲ್ಲಾ ಮಾತಾಡಬೇಡ ಎಂದು ಸಮಾದಾನ ಮಾಡಿ ಕರಕೊಂಡು ಬಂದನು.

ಮುಖ್ಯವಾದ ಸಂಗತಿಯೇನೆಂದರೆ ಸುಮತಿ ಶಿವಾಜಿ ಫೋಟೋನ್ನ ಮಾದೇವನಂಗೆ ಮೂಲೆಯಲ್ಲಿಡದೆ ಅದಕ್ಕೆ ಪೂಜ್ಯವಾಗಿ ಕಂಡು ಹೂವಿನ ಮಾಲೆಯನ್ನು ಹಾಕಿದ್ದಳು. ಅದನ್ನು ಕಂಡು ಮಾದೇವ ಇಂಥ ನಿರ್ಮಲ ಹೃದಯ (ಸುಮತಿ)ಕ್ಕೆ ಕಷ್ಟ ಕೊಟ್ಟೆನಲ್ಲ ಅಂದುಕೊಂಡು ನೋವಿನಿಂದಲೇ ಮೊದಲ ಮಾದೇವನಾಗಿ, ಕಾಂಬಳೆಯಾಗಿ ಬೆಂಡಿಗೇರಿಯಲ್ಲಿ ದಲಿತರಿಗೆ ಮಲ ತಿನ್ನಿಸಿದ ವಿರುದ್ಧ ಪ್ರತಿಭಟನೆಯಲ್ಲಿ ಪಾಲ್ಗೊಂಡನು. ಇತ್ತ ಸುಮತಿ ಬಂದು ಯಥಾರೀತಿಯಲ್ಲಿ ಮಕ್ಕಳಿಲ್ಲದ್ದೂ ಕಂಡು ಅಯ್ಯೋ ದೇವರೇ ಎರಡು ಮಕ್ಕಳನ್ನು  ಕರಕೊಂಡು ಹೋದನೆ, ಆ ಮಾದೇವ ಎಂದು ಕೂಗಾಡಿದಳು. ಅಲ್ಲಿಯೇ ಇದ್ದ ಪರಿಶ್ಯಾ ಮುಂತಾದವರು ವಿಚಾರಿಸಿದರು. ಕಾಶಕ್ಕ ಇಲ್ಲಾ ಅಂಬೇಡ್ಕರ ಗಾರ್ಡನ್ನಿಗಿ ಹೋಗ್ಯಾರು. ಯಾವನೋ ನಮ್ಮ ಜನಕ್ಕೆ ಹೇಲು ತಿನ್ನಿಸಿದನಂತೆ ಅದಕ್ಕೆ ಹೋಗ್ಯಾರು ಅಂದಳು.ಅಲ್ಲಿಯೇ ಏನಾದರೂ ಇರಬೇಕು ಎಲ್ಲರೂ ಅಲ್ಲೇ ಹೋಗಿದ್ದಾರೆ ಎಂದಳು.

ಸುದ್ದಿ ತಿಳಿದ ಕೂಡಲೇ ಸುಮತಿ ನೀರಡಿಸಿದ ಹಸುವಿನಂತೆ ಓಡಿ-ಓಡಿ ಬಂದು ಆ ಗುಂಪಿನಲ್ಲಿರುವ ಎಲ್ಲರನ್ನು ನೋಡಿದಳು.ಯಾರೂ ಗೋತ್ತಾಗಲಿಲ್ಲ ಏಕೆಂದರೆ ಆಕೆಗೆ ನಿಧಾನವಾಗಿ ನೋಡುವ ತಾಳ್ಮೆಯೇ ಇರಲಿಲ್ಲ. ನಿಧಾನವಾಗಿ ನೋಡಲೇ ಬೇಕು ಎಂಬ ಅನಿವಾರ್ಯದಿಂದ ಆಕೆ ಒಂದು ಕಡೆಯಿಂದ ಕಣ್ಣನ್ನು ಕೇಂದ್ರೀಕರಿಸಿ ನೋಡಲಾರಂಭಿಸಿದಳು. ಇಡೀ ಗುಂಪಿನ ಮುಂದುಗಡೆ ಸೈಕಲ್ಲಿನ ಮೇಲೆ ಫೋಟೋ ಇಟ್ಟುಕೊಂಡು ಮಕ್ಕಳನ್ನು ಕರಕೊಂಡು ಘೋಷಣೆ ಕೂಗುತ್ತಾ ಹೋಗುವುದನ್ನು ಕಂಡ ಕಣ್ಣುಗಳು ತಂಪಾದವು. ನೀರಡಿಸಿ ಬಂದ ಹಸು ನೀರು ಕುಡಿದು ಅರಾಮಾಗಿ ನಿಂತಂತಾಯ್ತು.

ಕೊನೆಗೆ ಆ ಜನಸಾಗರದಲ್ಲಿ ಸುಮತಿ ಸೇರಿ ಮೂವರಲ್ಲಿ ನಾಲ್ಕಾದರು. ಸುಮತಿ ಮಾದೇವ ಮಕ್ಕಳು ಚೀರಾಡುದರಲ್ಲಿದ್ದರೂ ಪುನಃ ಕೂಡಿದ ಗಳಿಗೆಯ ಸಂತೋಷ ಆನಂದದಿಂದ ದಣಿವು ಕಾಣಿಸಲೇ ಇಲ್ಲ. ಇಷ್ಟೆಲ್ಲಾ ಕಥಾವಿನ್ಯಾಸವನ್ನು ಹೊಂದಿರುವ 'ಹೊಲಗೇರಿಯ ರಾಜಕುಮಾರ' ಕಾದಂಬರಿಯು ಇನ್ನೂ ಹಲವು ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕಥೆಯನ್ನು ಪೋಣಿಸಿಕೊಂಡು ಹೋಗಿದೆ.

ಮೊದಲನೆಯದಾಗಿ 'ರಾಜಕೀಯ' ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾದವಂವ್‌ನ (ಕಥಾನಾಯಕ) ತಂದೆ ಅಚ್ಯುತರಾವ ಮತ್ತು ಚಿಕ್ಕಪ್ಪ ಸಂಭಾಜಿರಾವ ಕುರುಂದವಾಡದ ಆಸ್ತಿಗಾಗಿ ಸಾಮ್ರಾಜ್ಯಕ್ಕಾಗಿ ಪ್ರಾಣಗಳನ್ನೇ ಕಳಕೊಂಡರು. ಇದೊಂದು ರಾಜಕೀಯ ಆಗಿದೆ. ಸಂಭಾಜಿರಾವ ಅಣ್ಣ ಅಚ್ಯುತರಾವನನ್ನಲ್ಲದೇ ಅವನ

ಮಗ ಮಾಧವರಾವ (ಮಾದೇವ ಕಾಂಬಳೆ) ನನ್ನು ಕೊಲೆ ಮಾಡಿದರೆ ಆಸ್ತಿ ನನಗೆ ಸೇರುತ್ತದೆ ಎಂಬ ಕುತಂತ್ರ ರಾಜಕೀಯ ಮಾಡಿದ್ದನೆಂದು ಈ ಕಾದಂಬರಿಯಿಂದ ತಿಳಿಯುತ್ತದೆ.

ಎರಡನೆಯದಾಗಿ 'ಸಾಮಾಜಿಕ ವ್ಯವಸ್ಥೆ' ಈ ವಿಷಯಕ್ಕೆ ಸಂಬಂಧಿಸಿ ಹೇಳುವುದಾದರೆ ಸಾಮಾಜಿಕ ಅಸಮಾನತೆ, ಅಗೌರವ, ಜಾತಿ ಬೇಧ ಹೀಗೆ ಸಾಮಾಜಿಕ ಜೀವನ ಸಮನಾಗಿರಲಿಲ್ಲ. ಉದಾ: ಹೊಲಗೇರಿಯ ಜನರನ್ನು 'ಮರಾಠರು,' 'ಕ್ಷತ್ರಿಯರು' ತುಚ್ಛವಾಗಿ ಕಾಣುವುದು. ಮಾದೇವನೇ ತನ್ನ ಜನ್ಮ ರಹಸ್ಯ ತಿಳಿದಾಗ ಅವನು ಮಾಡಿದ ಸಾಮಾಜಿಕ ಜಾತಿ ನಿಂದನೆ ಅವಹೇಳನೆ ತಿರಸ್ಕಾರ ಹೇಳತೀರದು.

ಮೂರನೆಯದಾಗಿ 'ಸಾಂಸ್ಕೃತಿಕ ಸ್ಥಿತಿ-ಗತಿ' ಇಲ್ಲಿ ವಿಶೇಷವಾಗಿ ಸುಮತಿಯ ವಿಶಾಲ ಮನೋಭಾವನೆಯನ್ನು ಗಮನಿಸಬೇಕಾಗಿದೆ. ಗಂಡ ಮಾದೇವ ಅಂಬೇಡ್ಕರ ಫೋಟೊವನ್ನು ತಿರಸ್ಕರಿಸಿ, ಶಿವಾಜಿ ಫೋಟೋವನ್ನು ಗೋಡೆಗೆ ಅಂಟಿಸಿ ಮನೆ ಬಿಟ್ಟು ತನ್ನವರನ್ನು ಹುಡುಕಿಕೊಂಡು ಹೋಗಿ ಪಶ್ಚಾತ್ತಾಪ ಪಟ್ಟು ಮರಳಿ ಬಂದು ನೋಡಿದರೆ ಶಿವಾಜಿ ಫೋಟೋಗೆ ಮಾಲೆ ಹಾಕಿದ್ದಳು. ಅಂಬೇಡ್ಕರ ಫೋಟೋಗೆ ಪ್ರೇಮ್ ಹಾಕಿಸಿದ್ದಳು. ಇದನ್ನು ನೋಡಿ ಹೊಲಗೇರಿಯ ಪ್ರೀತಿ ವಾತ್ಸಲ್ಯ ಎಂಥದ್ದು ಇದು ಭವ್ಯ ಸಂಸ್ಕೃತಿ ಅಂದುಕೊಂಡನು. ಅಲ್ಲಿನ ಕಿರಿಯರಿಂದ ಹಿಡಿದು ಹಿರಿಯರವರೆಗೂ ಇರುವ ವಿನಯ ವಿಧೇಯತೆ ಮೆಚ್ಚುವಂತಹದ್ದು, ಮಾದೇವನ ಕುಟುಂಬ ತುಂಬಾ ಕಲರವದಿಂದ ಕೂಡಿತ್ತು, ಮಾದೇವನಿಗೆ ಜನ್ಮರಹಸ್ಯ ಗೊತ್ತಾಗದವರೆಗೆ ಆ ಮೇಲೆ ಮಾದೇವ ಮರಳಿ ಬಂದರೂ ಯಾರೂ ತಿರಸ್ಕರಿಸಲಿಲ್ಲ ಪುನಃ ಹೃದಯಪೂರ್ವಕವಾಗಿ ಸ್ವಾಗತಿಸಿದರು. ಕಲ್ಮಶವಿಲ್ಲದ ಮನಸುಗಳು ಇದ್ದವು ಅಲ್ಲಿ ಸಂಪ್ರದಾಯವೆಂಬಂತೆ 'ಜೋಗತಿ' ಬಿಡುವ ಸಂಸ್ಕೃತಿ ಇತ್ತು ಇದೊಂದು ಸರಿಯಲ್ಲದ್ದು ಎಂದು ಹೇಳಬಹುದು. ಅದನ್ನು ನಾಶಮಾಡಲು ಹೋಗಿ ಮಾದೇವ ಹೊಲಗೇರಿಯನ್ನೇ ನಾಶಮಾಡಬೇಕು ಎನ್ನುವಷ್ಟರ ಮಟ್ಟಿಗೆ ಸಿಟ್ಟಾಗಿದ್ದನು.

ನಾಲ್ಕನೆಯದಾಗಿ 'ಧಾರ್ಮಿಕ' ವ್ಯವಸ್ಥೆ ಹೊಲಗೇರಿಯ ಹೀರಾಬಾಯಿ ಗಂಡ ಜಾನೂಬಾ ಇಬ್ಬರು ದೇವರು ಧರ್ಮ ನಂಬಿಕೆ ಪೂಜೆ ಎಂಬ ಅಂಶಗಳಲ್ಲಿ ತಲ್ಲೀನರಾಗಿದ್ದರು ಎನ್ನುವುದಕ್ಕಿಂತ ಆಧ್ಯಾತ್ಮಿಕ ರಂಗದಲ್ಲಿ ಭಕ್ತಿಯಿಂದಿದ್ದರು. ಹೀರಾಬಿಯಿ- ಮಗ ಮಾದೇವನಿಗೆ ಮಕ್ಕಳಾಗಲಿಲ್ಲವಾದ್ದರಿಂದ ಕಂಡ ದೇವರುಗಳಿಗೆ ಬೇಡಿಕೊಳ್ಳುತ್ತಿದ್ದಳು. ಹೀರಾಬಾಯಿ ಸೊಸೆಯಾದ ಸುಮತಿ ಸಮೇತ ಅರಕೆ ಹೊತ್ತುತ್ತಿದ್ದಳು. ಒಂದು ಸಲ ಗಂಡನಿಗೆ "ನೀವೂ ಬರ್ರಿ ನಾನು ದೇವರಿಗೆ ಬೇಡಿಕೊಂಡಿದಿನಿ ಇಬ್ಬರೂ ಬರ್ರೀವಂತ" ಅನ್ನುವದನ್ನು ಗಮನಿಸಬಹುದು. ಮಕ್ಕಳಷ್ಟೇ ಅಲ್ಲ ಮಾದೇವನಿಗೆ ಮೊದಲು ಕೆಲಸ ಸಿಕ್ಕಿರಲಿಲ್ಲ. ಮನೆಯಲ್ಲಿ ತೊಂದರೆಯಾಗಿತ್ತು ಆಗ ಹೀರಾ ಸುಮತಿಯೇ ದೇವರಲ್ಲಿ ಬೇಡಿಕೊಂಡಿದ್ದರು. ಹೀಗೆ ಕಾದಂಬರಿಯು ಧರ್ಮದ ದೇವರ ಭಕ್ತಿಯ ಕಲ್ಪನೆಯನ್ನು ತೋರಿಸುತ್ತದೆ.

ಐದನೆಯದಾಗಿ 'ಶಿಕ್ಷಣ'-'ನೌಕರಿ' ಮಾದೇವನು ಶಾಲೆಗೆ ಹೋಗಿ ಕಲಿತು ಬುದ್ಧಿವಂತನಾಗಿ ಅಧ್ಯಯನ ಮಾಡಿ ಇಡೀ ಊರಿಗೆ (ಕೇರಿಗೆ, ನಾಡಿಗೆ) ಪಾಲಕರಿಗೆ ಕೀರ್ತಿ ತಂದನು. ಸರಸ್ವತಿ ಎಂಬುವಳು ಎಲ್ಲರಿಗೂ ಒಲಿಯುವಳು ಎಂಬುದನ್ನು ಸಾಬೀತು ಪಡಿಸಿದನು. ಮಾದೇವನು ಹೊಲಗೇರಿಯಲ್ಲಿದ್ದರೂ ಶಾಲೆಗೆ ಪ್ರಥಮ ರಾಜ್ಯಕ್ಕೆ ೨೦ನೇ ರ್‍ಯಾಂಕ್ ಬಂದಿದ್ದನು. ಎಲ್ಲಾ ಮರಾಠರ ಶಾಲೆ ಕಾಲೇಜು ಸಿಬ್ಬಂದಿ ಬೆರಗಾದರು. ಹಾಗೆಯೇ ಹೆಚ್ಚಿನ ಅಂಕ ಗಳಿಸಿದ್ದರಿಂದ ಸರ್ಕಾರಿ ನೌಕರಿ ಸಹ ಸಿಕ್ಕಿತು. ಆಗ ಎಲ್ಲಿಲ್ಲದ ಸಂತೋಷ ಆಗಿತ್ತು. ಮಾದೇವನ ಜೊತೆಗೆ ಕೊಲ್ಕಾರ, ವಾಘಮೊರೆ, ಕುಲಕರ್ಣಿ ಇತರರು ಕೆಲಸ ಮಾಡುತ್ತಿದ್ದರು. ಇನ್ನು ಶಾಲೆ ಓದಬೇಕಾದರೆ ದಲಿತರಿಗೆ ಮೀಸಲಾತಿ ಮತ್ತು ಧನ ಸಹಾಯ ಇತ್ತು ಆದರೆ ಮಾನಸಿಕವಾಗಿ ಉನ್ನತವರ್ಗದವರು ಶೋಷಣೆ ಮಾಡುತ್ತಿದ್ದರು. ಶಾಲಾ ಕಾಲೇಜಿನ ಆವರಣದಲ್ಲಿ ಸ್ನೇಹಿತರು ಮತ್ತು ಕೆಲ ಶಿಕ್ಷಕರು (ಪ್ರಾಧ್ಯಾಪಕರು) ಹೀನವಾಗಿ ಕಾಣುತ್ತಿದ್ದರು ಎಂಬ ಅನುಭವ ಮಾದೇವನಿಗಾಗಿತ್ತು.

ಆರನೆಯದಾಗಿ 'ಆರ್ಥಿಕ' ವ್ಯವಸ್ಥೆ ಮಾದೇವನಿಗೆ ಮದುವೆಯಾದ ಮೇಲೆ ಮಾದೇವ ಕಾಲೇಜ ಬಿಟ್ಟು ಕೆಲಸ ಮಾಡಲು ನೋಡುತ್ತಿದ್ದ. ಮಾದೇವನಿಗೆ ಕಾಲೇಜಿನಲ್ಲಿ ಕೊಟ್ಟ ನಗದು ಬಹುಮಾನದ ದುಡ್ಡಿನಲ್ಲಿ ತಂದೆ ಜಾನೂಬಾ ಸೀದಾ ಹೋಗಿ ಒಂದು ಎಮ್ಮೆಯನ್ನು ಕೊಂಡು ತಂದನು. ಹೀರಾಬಾಯಿ ಯಾಕೆ? ತಂದಿರಿ ಅಂದಾಗ ಇಲ್ಲಾ ಅದಕ್ಕೆ ಸ್ವಲ್ಪ ಹುಲ್ಲು ಹಾಕಿದರೆ ನಮಗೆ ಹಾಲು ಕೊಡುತ್ತೆ ದುಡ್ಡು ಬರುತ್ತೆ ಎಂದು ಆರ್ಥಿಕವಾಗಿ ಯೋಚಿಸಿದ್ದನು.

ಏಳನೆಯದಾಗಿ 'ಭಾಷಿಕ' (ಮಿಶ್ರಭಾಷೆ)ವಾಗಿ ಡಾ. ಶಿವರುದ್ರ ಕೆ. ಕಲ್ಲೋಳಿಕರ್ ಅವರು ತಮ್ಮ ಕಾದಂಬರಿಯಲ್ಲಿ 'ಕನ್ನಡ'ದ ಜೊತೆಜೊತೆಗೆ 'ಮರಾಠಿ' ಭಾಷೆಯನ್ನು ಬಳಸಿದ್ದಾನೆ. ಏಕೆಂದರೆ ಅನೇಕ ವರ್ಷಗಳಿಂದ ಬೆಳಗಾವಿ ಮರಾಠಿಯನ್ನು ಸಂಪರ್ಕದಲ್ಲಿಟ್ಟುಕೊಂಡಿದೆ. ಅನೇಕ ಮರಾಠಿಗರು ಕನ್ನಡವನ್ನು ಹಾಡುವರು. ಪ್ರಾದೇಶಿಕ (ಬೆಳಗಾವಿಯ) ಭಾಷೆಯೆಂದರೆ 'ಕನ್ನಡ ಮತ್ತು ಮರಾಠಿ' ಎನ್ನುವಷ್ಟು ಆಂತರಿಕವಾಗಿ ಸಂಬಂಧವನ್ನು ಹೊಂದಿವೆ. ಕಾದಂಬರಿಯಲ್ಲಿ ಬರುವ ಪಾತ್ರಗಳು ಶೇ ೭೦ರಷ್ಟು ಕನ್ನಡ ಬಳಸಿದರೂ ಉಳಿದ ಭಾಗ ಮರಾಠಿ ಆಗಿದೆ. ಅಲ್ಲದೆ ಇಂಗ್ಲೀಷ್, ಹಿಂದಿ, ಉರ್ದು ಮತ್ತು ಶಿಷ್ಟ ಕನ್ನಡ ಭಾಷೆಗಳನ್ನು ಬಳಸಿಕೊಂಡಿದ್ದರಿಂದ 'ಕಾದಂಬರಿಯ' ಭಾಷಿಕ ವಿವೇಚನೆ ಮಾಡಲು ಸೂಕ್ತವಾಗಿದೆ.

ಎಂಟನೆಯದಾಗಿ 'ದಲಿತ ಸಂವೇದನೆ' ದಲಿತ ಸಂವೇದನಾಶೀಲ ಕೃತಿಗಳಲ್ಲಿ ಕಲ್ಲೋಳಿಕರ್ ಅವರ 'ಹೊಲಗೇರಿಯ ರಾಜಕುಮಾರ' ಕಾದಂಬರಿಯು ಒಂದು ವಿಶೇಷವಾಗಿದೆ. ಇದು ಕಲ್ಲೋಳಿಕರ್ ಅವರ ಮೊಟ್ಟಮೊದಲ ಕಾದಂಬರಿಯಾದರೂ ಎಲ್ಲಾ ವಿಮರ್ಶಕ ಕಣ್ಣಿಗೆ ಬಿದ್ದಿದೆ. ಕಲ್ಲೋಳಿಕರ್ ಅವರು ಮೂಲತಃ ಹೋರಾಟಗಾರರು, ಚಳುವಳಿಗಳಲ್ಲಿ ನೇರವಾಗಿ ಧುಮುಕುವವರೂ ಆಗಿದ್ದರಿಂದ ಈ ಕಾದಂಬರಿಯ ಮೂಲ ನೆಲೆಗಟ್ಟು ಹೋರಾಟವೇ ಆಗಿದೆ. ಅದು ದಲಿತ ಸಂವೇದನೆಯ ವಿಚಾರದಲ್ಲಿ ಎಂದು ಹೇಳಬಹುದು.

# ಅಧ್ಯಾಯ ಮೂರು

## ಪಾತ್ರಗಳು

ದಲಿತ ಸಂವೇದನೆಯ ಅತ್ಯುತ್ತಮವಾದ ಕಾದಂಬರಿಗಳಲ್ಲಿ ಒಂದಾದ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿನ ಪಾತ್ರಗಳು ಒಂದು ಸಮಾಜದ ಸಂಸ್ಕೃತಿಯನ್ನು ಅತ್ಯಂತ ಸಮರ್ಥವಾಗಿ ಅಭಿವ್ಯಕ್ತಿಸುವಲ್ಲಿ ಸಫಲವಾಗಿವೆ.

ಕಾದಂಬರಿಯೊಳಗಿನ 'ಪಾತ್ರಗಳು' ಗ್ರಾಮೀಣ ಬದುಕಿನ ನೆಲಗಟ್ಟಿನ ಮೇಲೆಯೇ ರಚನೆಗೊಂಡಿದ್ದರಿಂದ ಸಮಯ ಸಂದರ್ಭಕ್ಕೆ (ಸನ್ನಿವೇಶ) ತಕ್ಕಂತೆ ಪಾತ್ರಗಳನ್ನು ರಚನೆ ಮಾಡಿ ನೋಡಿದ ರೀತಿ ಅದ್ಭುತವಾಗಿದೆ. 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಅನೇಕ ನಿರೂಪಕರು ಇಲ್ಲದಿದ್ದರೂ, ಅಲ್ಲಿ ಅನೇಕ ಶೈಲಿ ಧಾಟಿಯ ನಿರೂಪಣೆಗಳು ಸಹಜವಾಗಿವೆ. ಕಾದಂಬರಿಯ ಇಡೀ ನಿರೂಪಣೆಯನ್ನು ಕಾದಂಬರಿಕಾರರೇ ಮಾಡುತ್ತಾರೆ. ಮತ್ತು ಪಾತ್ರಗಳಿಂದ ಹೇಳಿಸುತ್ತಾರೆ. ಇವರು ಸಾಹಿತ್ಯ ಕ್ಷೇತ್ರಕ್ಕೆ ಹೊಸಬರಾದರೂ ಹಳೆಯ ಅನುಭವಿಗಳಂತೆ ಈ ಕಾದಂಬರಿಯ ನಿರೂಪಣಾ ರಚನಾ ತಂತ್ರದಿಂದ ಕಂಡುಬರುತ್ತದೆ.

ಲೇಖಕರು ಪ್ರಾದೇಶಿಕ ಜನರ ಹೆಸರುಗಳನ್ನೇ ಮುಖ್ಯವೆಂದು ಬಾವಿಸಿದ್ದರಿಂದ ಪ್ರಾದೇಶಿಕ ಹೆಸರಿನ ಪಾತ್ರಗಳನ್ನು ಕಾದಂಬರಿಯ ಮೂಲಕ ಚಿತ್ರಿಸಿದ್ದಾರೆ ಇದರಿಂದ ಆ ಸಮುದಾಯದ ಅನುಭವಕ್ಕೆ ತಕ್ಕಂತೆ ಕಥೆ ಮೂಡಿದೆ.

ಕೆಲವು ವರ್ಷಗಳ ಹಿಂದೆ ಬೆಳಗಾವಿಯಲ್ಲಿ ಸಿನಿಮಾದಲ್ಲಿ ಮಾತ್ರ ನಡೆಯಬಹುದಾದ ಅಭೂತ ಪೂರ್ವವಾದ ಘಟನೆ (ಸಂಗತಿ) ನಡೆಯಿತು. ಅದೇನೆಂದರೆ, 'ಪೋಸ್ಟ್ ಮಾಸ್ತರ್' ಕೆಲಸ ನಿರ್ವಹಿಸುತ್ತಿದ್ದ, ಮತ್ತು ಜಾತಿಯಿಂದ ಹೊಲೆಯರಾದ ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ್ ತಾನು ಕುರುಂದವಾಡ ಸಂಸ್ಥಾನದ ರಾಜಕುಮಾರನೆಂದೂ, ತಾನು ಇನ್ನೂ ಚಿಕ್ಕವನಿರುವಾಗಲೇ ಅಲ್ಲಿ ಕ್ಷಿಪ್ರ ಕ್ರಾಂತಿಯಾಗಿ ಆಗಿನ 'ಕುರುಂದವಾಡ' ಸಂಸ್ಥಾನದ ರಾಜನಾಗಿದ್ದ ತನ್ನ ಅಜ್ಜ ಹಾಗೂ ತಂದೆ ತಾಯಿಯರನ್ನು ಕೊಲ್ಲಲಾಯಿತೆಂದೂ,

ತನ್ನನ್ನು ಅರಮನೆಯಲ್ಲಿ ಕೆಲಸಕ್ಕಿದ್ದ ಆಸ್ಥಾನದ ಆಪ್ತ ಸಹಾಯಕನಾಗಿದ್ದ ನಾನಾ ಸಾಹೇಬ ರಕ್ಷಿಸಿ, ಹೊಲೆಯ ಜಾನೂಬಾನ ಮನೆಯಲ್ಲಿ ಬಿಟ್ಟನು. ಬೆಳೆದು ದೊಡ್ಡವನಾಗಿ ತನ್ನ ಜನ್ಮವೃತ್ತಾಂತ ತಿಳಿದ ಮೇಲೆ ಮಾದೇವನು ಅಂದರೆ ಚಂದ್ರಪ್ಪ ಕಲ್ಲಪ್ಪ ಕೋಲ್ಕಾರ್ ತನ್ನ ಮೂಲ ಪಿತೃಗಳಿಗೆ ಸಂಬಂಧಿಸಿದ್ದ ಎಲ್ಲಾ ಆಸ್ತಿ-ಪಾಸ್ತಿಗಳನ್ನು ವಾಪಸ್ಸು ನೀಡಬೇಕೆಂದು ಬೆಳಗಾವಿ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ಅರ್ಜಿಯೊಂದನ್ನು ಸಲ್ಲಿಸಿದ್ದನು.

ಪ್ರಕರಣಕ್ಕೆ ಸಂಬಂಧಿಸಿದ್ದ ಎಲ್ಲಾ ಮೂಲ ದಾಖಲೆಗಳೂ ಸಹಿತ ಕೋಲ್ಕಾರನಲ್ಲಿ ಇದ್ದವು. ದಾಖಲೆಗಳಂತೆ ಬೆಳಗಾವಿ ಸುತ್ತಮುತ್ತ ೫೬೫೦ ಎಕರೆ ಭೂಮಿ ಅವನಿಗೆ ಸೇರಬೇಕಾಗಿತ್ತು. ಈ ಎಲ್ಲಾ ವಿಚಾರಗಳು ಅನೇಕರಿಗೆ ಹುಚ್ಚುತನವಾಗಿತ್ತು. ಆದರೆ ಅವನ ವಾದ ನಿಜವಾಗಿತ್ತು. ವಿಭಾಗಾಧಿಕಾರಿಗಳು ಇದನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಆದರೂ ಮಾದೇವ ಅಥವಾ ಕೋಲ್ಕಾರ ಮಾತ್ರ ಎಡೆಬಿಡದೆ ಅದನ್ನು ಮುಂದುವರಿಸುತ್ತಿದ್ದನು.

**ಕಾದಂಬರಿಯಲ್ಲಿ ಬರುವ ಪಾತ್ರಗಳು**

**ಮಾಧವರಾವ ಗಾಯಕವಾಡ :** ಅಚ್ಯುತರಾವ್ ಗಾಯಕ್ವಾಡ್ ಎಂಬ ರಾಜನ ಮಗ

**ನಾನಾ ಸಾಹೇಬ :** ಅಚ್ಯುತರಾವ್ ಗಾಯಕವಾಡ ಅವರ ಆಪ್ತಸಹಾಯಕ ಹಾಗೂ ಸಲಹೆಗಾರ.

**ಮಾದೇವ ಕಾಂಬಳೆ :** ಪೋಸ್ಟ್ ಮಾಸ್ಟರ್ ಕೆಲಸ ನಿರ್ವಹಿಸುತ್ತಿದ್ದ ಜಾತಿಯಿಂದ ಹೊಲೆಯನಾದ ಚಂದ್ರಪ್ಪ ಕಲ್ಲಪ್ಪ ಕೋಲ್ಕಾರ.

**ಸುಮತಿ :** ಮಾದೇವ ಕಾಂಬಳೆಯವರ ಹೆಂಡತಿ.

**ಅಂಬಾ :** ಮಾದೇವ ಕಾಂಬಳೆಯವರ ಮಗಳು.

**ವಾಘಮೋರೆ :** ಮಾದೇವ ಕಾಂಬಳೆಯ ಸಹೋದ್ಯೋಗಿ

**ಪುಣೇಕರ :** ಪೋಸ್ಟ್ ಅಂಡ್ ಟೆಲಿಗ್ರಾಫ್ ಡಿವಿಜನಲ್ ಮ್ಯಾನೇಜರ

**ಪಾಟೀಲ್ :** ಮಾದೇವ ಕಾಂಬಳೆ ಜೊತೆಗೆ ಕೆಲಸಕ್ಕೆ ಸೇರಿದವನು.

**ಕೋಲ್ಕಾರ :** ಮಾದೇವನ ಸಹೋದ್ಯೋಗಿ

**ನೇಮಾಡೆ :** ಎಸ್ಸಿ ಎಸ್ಟಿ ಅಸೋಶಿಯೇಷನ್ ಸಂಘಟಕ

**ಕುಲಕರ್ಣಿ :** ಆಫೀಸಿನಲ್ಲಿ ಕೆಲಸ ಮಾಡುವ ಕಿರಿಯ ಸಹಾಯಕ

**ಕುರುಂದವಾಡಕರ್ :** ಮಾದೇವನ ಹಿರಿಮೆಯ ಹೆಸರು

ಒಣಮುಕಳಿ ಸಾಹುಕಾರ : ಒಣಮುಕಳಿ ಸಂಗಪ್ಪನ ತಂದೆ

ಚಂದ್ರವ್ವ : ಹೋಟಲಿನ ಮಾಲಿಕೆ

ಮರೆಪ್ಪ : ಹೊಟಲಿನ ಗಿರಾಕಿ

ತುಳಸಿ : ವಿಮಲಿಯ ತಾಯಿ (ಹೊಲಗೇರಿಯ)

ವಿಮಲಿ : ತುಳಸಿಯ ಮಗಳು (ಹೊಲಗೇರಿಯ)

ಖಂಡೋಬ : ಹೊಲಗೇರಿಯಲ್ಲಿರುವ ಹಿರಿಯ ವ್ಯಕ್ತಿ

ಜಾನೂಬಾ : ಮಾದೇವ (ಕಾದಂಬರಿ ನಾಯಕ)ನ ತಂದೆ

ಹೀರಾಬಾಯಿ : ಜಾನೂಬಾನ ಹೆಂಡತಿ

ಸಂಭಾಜಿರಾವ : ಅಚ್ಯುತರಾವ್‌ನ ತಮ್ಮ

ಅಚ್ಯುತರಾವ : ಕುರುಂದವಾಡ ಸಂಸ್ಥಾನದ ಸ್ಥಾಪಕ (ಹಿರಿಯ) ಮಾದೇವನ ಅಜ್ಜ

ಮಾದೇವ ಜಾನೂಬಾ ಕಾಂಬಳೆ : ಶಾಲೆಯಲ್ಲಿನ ಮಾದೇವನ ನೊಂದಣಿಯ ಪೂರ್ಣ ಹೆಸರು

ಆನುಷಾದೇಶಪಾಂಡೆ : ಮಾದೇವನ ಸಹಪಾಠಿ

ಕರೆಪ್ಪಜ್ಜ : ಕೇರಿಯ ಅಜ್ಜ

ರಂಗವ್ವ : ಕರೆಪ್ಪನ ಹೆಂಡತಿ

ಗಾಡಿಗೀಳ : ಆರ್.ಪಿ.ಡಿ. ಕಾಲೇಜಿನ ಗಣಿತದ ಪ್ರೊಫೇಸರ್

ಜೋಶಿ : ಬಾಟನಿಯ ಪ್ರೊಫೇಸರ್

ದೇಶಪಾಂಡೆ : ಕೆಮಿಸ್ಟ್ರಿಯ ಪ್ರೊಫೆಸರ್

ಸಂಜೀವ ಕುಲಕರ್ಣಿ : ಮಾದೇವನ ಸಹಪಾಠಿ (ಸ್ನೇಹಿತ)

ದೀಕ್ಷಿತ : ಮಾದೇವನ ಸಹಪಾಠಿ

ಗೋಲ್ಪೆ : ಕಾಲೇಜಿನ ಜಾವನ

ಗಾಯ್ತೊಂಡೆ : ಕಾಲೇಜಿನ ಕ್ಲರ್ಕ್

ಮಿರಜಕರ : ಕಾಲೇಜ ಸೂಪರಿಂಟೆಂಡೆಂಟ್

ರಾಘು : ಕನ್ನಡ ಹೋರಾಟ ಸಮಿತಿ ಅಧ್ಯಕ್ಷ

ವಾಂಖೆಡೆ : ಪಾರ್ಟ್‌ಟೈಮ್ ಪ್ರೊಫೆಸರ್

ರಾವಶ್ಯ : ಹೊಲಗೇರಿಯವನು ರಾವಸು ಇವನ ಇನ್ನೊಂದು ಹೆಸರು

ಪಾರಿಶ್ಯಾ : ಹೊಲಗೇರಿಯವನು ಪರಸು ಇವನ ಇನ್ನೊಂದು ಹೆಸರು

ಸಪ್ಲಾಯರ್ : ಖಿಡೆ ಬಜಾರ ಹೋಟಲಿನವ

ಸೇಲ್ಸಮನ್ : ಅಂಗಡಿಯಲ್ಲಿದ್ದ ಸೇಲ್ಸಮನ್ (ವ್ಯಾಪಾರಸ್ಥ)

ಡಾಕ್ಟರ್ : ತಂದೆ ಜಾನೂಬಾಗೆ ಆರೋಗ್ಯ ಸರಿಯಿಲ್ಲದಾಗ ಚಿಕಿತ್ಸೆ ನೀಡಿದವ

ಕೊರವಂಜಿಗಳು : ಶಾಸ್ತ್ರ ಹೇಳುವವರು

ಸುಡುಗಾಡು ಸಿದ್ಧರು : ಜೋತಿಷ್ಯ ಹೇಳುವವರು

ಕುರ್ರಮಾಮಾಗಳು : ಭವಿಷ್ಯ ಹೇಳುವವರು

ಹನುಮಂತ ದೇವರ ಪೂಜಾರಿ : ಗುಡಿ ಅರ್ಚಕರು

ಫಕೀರವ್ವ : ಕೇರಿಯ ಬಂಧುಗಳು

ಸಕಾರಾಮ : ಕೋಲ್ಕಾರ್‌ನ ತಂದೆ

ಭೀಮಶ್ಯಾ : ಹೊಲಗೇರಿಯ ಮಾದೇವನ ಪಕ್ಕದ ಮನೆಯ ವ್ಯಕ್ತಿ

ಸಾವಿತ್ರವ್ವ : ಕೇರಿಯ ಹೆಂಗಸು

ಇನ್ಸ್‌ಪೆಕ್ಟರ್ : ವ್ಯಾಪ್ತಿಯ ಆರಕ್ಷಕ ಅಧಿಕಾರಿ

ಮಾದವರಾವ್ : ಮಾದೇವನ ತಿದ್ದುಪಡಿ ನಂತರದ ಕ್ಷತ್ರಿಯ ಹೆಸರು

ಜಾನೂ : ಮಾದೇವನ ಕಿರಿಯ ಪುತ್ರ

ಅರ್ಜುನರಾವ ಕರಾಡಕರ : ನಾನಾ ಸಾಹೇಬ ಕರಾಡಕರನ ಪತ್ತೆಹಚ್ಚಲು ಸೂಕ್ತವಾದ ವ್ಯಕ್ತಿ (ಹಮಾಲದಾರ)

ಕಾಕಾಸಾಹೇಬ : ಮಾದೇವನನ್ನು ಚಿಕ್ಕಂದಿನಲ್ಲಿ ಎತ್ತಿಆಡಿಸಿದ್ದವನು.

ಅಹಲ್ಯಾಬಾಯಿ : ಮಾದೇವನ ಸೋದರತ್ತೆ

ರಾಮಕ್ಕ : ಹೊಲಗೇರಿಯಲ್ಲಿ ಇರುವ ಹೆಣ್ಣುಮಗಳು

ಪ್ರೊ.ಕದಂ : ಶಿವಾಜಿ ವಿದ್ಯಾಪೀಠದ ಪ್ರಾಧ್ಯಾಪಕರು

ಸ್ಟೇಷನ ಮಾಸ್ತರ : ರೈಲು ನಿಲ್ದಾಣದ ಮುಖ್ಯಸ್ಥ

ಟಿಕೆಟ್ ಕಲೆಕ್ಟರ್ : ಚೆಕಿಂಗ್ ಆಫೀಸರ್

ಅಶೋಕ ಐನವರ್ : ದಲಿತ ಸಂಘಟನೆಯ ಕಾರ್ಯಕರ್ತರು.

ವೈ.ಪಿ. ಕಾಂಬಳೆ : ದಲಿತ ಸಂಘಟನೆಯ ಕಾರ್ಯಕರ್ತರು

**ಪಾತ್ರಗಳ ವಿವರ :**

**ಶ್ರೀಮಾದವರಾವ ಗಾಯಕವಾಡ :**

ಇವನು ಕುರುಂದಾವಡದ ಕೊನೆಯ ರಾಜ ಅಚ್ಯುತರಾವ್ ಗಾಯಕವಾಡ್‌ನ ಮಗ ಇವನ ಬಗೆಗೆ ಕಾದಂಬರಿಯಲ್ಲಿ ಉಲ್ಲೇಖ ಬರುತ್ತದೆ. ಆದರೆ ಇವನು ಮಾದೇವನ ಕನಸಿನಲ್ಲಿ ತಾನೇ ಮಾದವರಾವ್ ಗಾಯಕವಾಡನಂತೆ ಕಲ್ಪಿಸಿಕೊಳ್ಳುತ್ತಾನೆ ರಾಜನಂತೆ ವರ್ತಿಸುತ್ತಾನೆ. ಯುದ್ಧಕ್ಕೆ ಸಿದ್ದನಾಗುತ್ತಾನೆ. ಯುದ್ಧವನ್ನು ಮಾಡುತ್ತಾನೆ. ಅದು ಕನಸಿನಲ್ಲಿ ಆಗಿರುವುದರಿಂದ ಪಕ್ಕದಲ್ಲಿ ಮಲಗಿದ ಹೆಂಡತಿಯನ್ನು ಒದೆಯುತ್ತಾನೆ.

**ನಾನಾ ಸಾಹೇಬ :**

ಕುರುಂದವಾಡ ಸಂಸ್ಥಾನದಲ್ಲಿ ರಾಜ ಶ್ರೀಮಾನ್ ಅಚ್ಯುತರಾವ ಗಾಯಕವಾಡ ಅವರ ಆಸ್ಥಾನ ಮಂತ್ರಿ ಹಾಗೂ ಆಪ್ತಸಹಾಯಕ ಆಗಿದ್ದರು. ಸುಮಾರು ೧೯೪೬ ಜೂನ್ ತಿಂಗಳದಂದು ವಿಪರೀತ ಮಳೆ ಅಷ್ಟೇ ಅಲ್ಲ ರಾಜ್ಯದ ಸ್ವಾತಂತ್ರ್ಯ ಚಳುವಳಿಯ ಪ್ರಯುಕ್ತವಾಗಿ ಆಸ್ಥಾನದ ರಾಜರಾದ ಸಾಹೋದರರಾದ ಅಚ್ಯುತರಾವ್ ಮತ್ತು ಸಂಭಾಜಿರಾವ ಇಬ್ಬರ ನಡುವೆ ಆಸ್ತಿಯ ದುರಾಸೆಯಲ್ಲಿ ಸಂಭಾಜಿರಾವ ಅಣ್ಣನನ್ನು ಕೊಂದು ಅತ್ತಿಗೆಯನ್ನು ಸಾಯಿಸಿ ಇರುವ ಒಂದೇ ಹಸುಗೂಸು ಅದು ಮುಂದೆ ಪಾಲು ಕೇಳಬಹುದು ಇಲ್ಲಾ ಸಂಸ್ಥಾನವೇ ನನ್ನದು ಎನ್ನಬಹುದು ಅಂದುಕೊಂಡು ಕೂಸನ್ನು ಕೊಲ್ಲಲು ಯತ್ನಿಸಿದ್ದರಿಂದ ಆ ಕೂಸನ್ನು ಎತ್ತಿಕೊಂಡು ಬಂದು ಹೊಲಗೇರಿಯ ಹೀರಾಬಾಯಿ ಮತ್ತು ಜಾನೂಬಾಗೆ ಅದರ ಜನ್ಮ ರಹಸ್ಯವನ್ನು ನೀಡಿ ಕಾಪಾಡುವಂತೆ ಕೇಳಿಕೊಳ್ಳುತ್ತಾನೆ ಕಾಣದಂತೆ ಹೊರಟುಹೋಗುತ್ತಾನೆ.

**ಮಾದೇವ ಜಾನೂಬಾ ಕಾಂಬಳೆ :**

ಕಾದಂಬರಿಯ ನಾಯಕ ಪಾತ್ರ ನಿರ್ವಹಿಸಿದವನೇ ಇವನು. ಕ್ಷತ್ರಿಯವಂಶದ ಕುಡಿಯಾಗಿದ್ದರೂ ಬಾಲ್ಯದಲ್ಲಿಯೇ ಹೊಲಗೇರಿಯ ಸಂಸ್ಕೃತಿಯಲ್ಲಿನ ಹೀರಾಬಾಯಿ ಜಾನೂಬಾ ಅವರ ತೋಳ್ಬಲದಲ್ಲಿ ಬೆಳೆದನು. ಶಾಲೆಗೆ ಹೆಸರನ್ನು ನೊಂದಾಯಿಸಬೇಕಾದರೆ ತಂದೆ ಜಾನೂಬಾ ''ಮಾದೇವ ಜಾನೂಬಾ ಕಾಂಬಳೆ'' ಎಂದು ನೀಡುತ್ತಾನೆ. ಮಾದೇವನು ಇತರ ಹುಡುಗರಂತೆ ಸಮಯ ವ್ಯರ್ಥಮಾಡದೇ ಚೆನ್ನಾಗಿ

ಓದಿ ಕಾಲೇಜಿಗೆ ಪ್ರಥಮ ರಾಜ್ಯಕ್ಕೆ ೨ಂನೇ ರ್‍ಯಾಂಕ್ ಬಂದನು. ಇದಕ್ಕೆ ವಿದ್ಯಾಸಂಸ್ಥೆಯವರು ಸನ್ಮಾನ ಮಾಡುವರು.

ಇಷ್ಟೆಲ್ಲಾ ಆದ ಮೇಲೆ ಪೋಸ್ಟ್ ಆಫೀಸಿನಲ್ಲಿ ಕೆಲಸ ಸಿಕ್ಕಿತು. ಸುಮತಿಯೊಂದಿಗೆ ಮದುವೆಯೂ ಆಯಿತು. ಹೊಲಗೇರಿಯ ತುಳಸಿ ಇವನು ಜನ್ಮ ರಹಸ್ಯವನ್ನು ಬೈಗಳಮೂಲಕ ತಿಳಿಸುತ್ತಾಳೆ ಅದರಿಂದ ಕಂಗೆಟ್ಟು ತಾನು ಮಹಾರ್ ಅಲ್ಲವೆಂದು ಮರಾಠನೆಂದು ತಿಳಿದು ಸಂತಸ ಪಡುತ್ತಾನೆ. ಜನ್ಮ ರಹಸ್ಯವನ್ನು ಮತ್ತೂ ತಿಳಿಯಲು ಕುರುಂದವಾಡಕ್ಕೆ ಹೋಗುತ್ತಾನೆ. ಅದಕ್ಕೂ ಮುಂಚೆ ಪೋಸ್ಟ್ ಆಫೀಸಿನಲ್ಲಿ ಕೆಲಸ ಮಾಡುತ್ತಿರುತ್ತಾನೆ. ನಾನು ಕ್ಷತ್ರಿಯ ಕುಲದ ಆಸ್ಮಿತ ಕುರುಂದವಾಡದ ಕುಲಪುತ್ರ. ಈ ಹೊಲತಿಯ ಮಗನಲ್ಲ ಎಂಬ ಒಂದೇ ಮಾತು ಗೊತ್ತಿದ್ದರೆ, ಎದೆಯುಬ್ಬಿಸಿ ನಡೆಯುತ್ತಿದ್ದೆ ಮಹಾರ್ ಎಂಬ ಕಳಂಕ ತೊಳೆದುಕೊಳ್ಳುತ್ತಿದ್ದೆ ಎನ್ನುತ್ತಾನೆ. ತನ್ನ ಜನ್ಮರಹಸ್ಯ ತಿಳಿದನಂತರ ಅವನಿಗೆ ಹಿಂದಿನ ಜೀವನದ ಬಗೆಗೆ ಅಸಹ್ಯ ಮೂಡುತ್ತದೆ. ಹೆಂಡತಿ ಮಕ್ಕಳನ್ನು ಬಿಟ್ಟು ಹೋಗುತ್ತಾನೆ.

ಈ ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ ಎಂತೆಂಥ ರಾಜರೆಲ್ಲ ಸರ್ವನಾಶವಾದರು ಎಂದು ಮನ ಪರಿವರ್ತನೆ ಆಗಿ, ಮಾದೇವನು ರೈಲ್ವೆ ಪ್ಲಾಟಫಾರಂದ ಒಂದು ಕಡೆ ೧ಂ ವರ್ಷದ ಮಗು ಜೋರಾಗಿ ಅಳುದನ್ನು ಕಂಡು ತನ್ನ ಸುಮತಿ ಮಕ್ಕಳು ನೆನಪಾಗಿ ಬಾವೋದ್ರೇಕನಾಗಿ ರೈಲು ಸಾಂಬ್ರ ತಲಪಿದ ಕೂಡಲೇ ಆಟೋ ಅತ್ತಿದ ಮಾದೇವ ವಡಗಾಂವ ಮಹಾರವಾಡ ಎಂದು ಮನೆಗೆ ಬರುತ್ತಾನೆ. ಬಾಬಾ ಸಾಹೇಬರ ಫೋಟೋ ತೆಗೆದುಕೊಂಡು ಮತ್ತೆ ತನ್ನ ಜಾತಿಯವರೊಂದಿಗೆ ದಲಿತರಿಗೆ ಸವರ್ಣಿಯರು ಹೇಲು ತಿನ್ನಿಸಿದ್ದರ ವಿರುದ್ಧವಾಗಿ ''ಹೇಲು ತಿನ್ನಿಸಿದ ಹೊಲಸು ಸವರ್ಣಿಯರಿಗೆ ದಿಕ್ಕಾರ ! ಬಾಬಾ ಸಾಹೇಬ ಅಂಬೇಡ್ಕರಕೀ ಜೈ'' ಎಂದು ಘೋಷಣೆಗಳನ್ನು ಕೂಗುತ್ತಾ ಹೋಗುತ್ತಾನೆ. ಅಲ್ಲದೆ, ತಾನು ಬೆಳೆದ ಹೊಲಗೇರಿಯಲ್ಲಿಯೇ ಇರಲು ನಿಶ್ಚಯಿಸುತ್ತಾನೆ.

**ಸುಮತಿ :**

ಇವಳು ಮಾದೇವ ಕಾಂಬಳೆಯ ಹೆಂಡತಿ ಮಾದೇವ ತಾನು ಕುರುಂದವಾಡದ ರಾಜ ಎಂದೆಲ್ಲ ಹೇಳುವಾಗ ಅವನನ್ನು ಹಲವು ಬಾರಿ ಸಂತೈಸುತ್ತಾಳೆ. ಈಗ ನೀವು ಗಾಯಕವಾಡ ಆದರೂ ಏನಾಗುತ್ತದೆ. ನಿಮಗೆ ತಲೆ ಸರಿಯಿಲ್ಲ, ಏನೋ ಯೋಚನೆ ಬಿಟ್ಟು ಬಾಳುವೆ ಮಾಡಿ ಎನ್ನುತ್ತಾಳೆ. ಇವಳಿಗೆ ಇಬ್ಬರು ಮಕ್ಕಳು ಅತ್ತೆ ಮಾವನ ಮುದ್ದಿನ ಸೋಸೆ. ತನ್ನ ಗಂಡನಿಗೆ ಕುರುಂದವಾಡದ ರಾಜ ಎಂಬ ಜನ್ಮವೃತ್ತಾಂತ ತಿಳಿದು ಇವಳನ್ನು ಕೆಲವು ದಿನ ಬಿಟ್ಟುಹೋದಾಗ ತನ್ನ ಜೀವನ ನಿರ್ವಹಣೆಯನ್ನು ತಾನೇ ಮಾಡಿದಾಕೆ, ಮರಳಿ ಬಂದ ಮಾದೇವನನ್ನು ಪುನಃ ಪ್ರೀತಿಯಿಂದ ಸ್ವೀಕರಿಸಿದಾಕೆ.

**ಅಂಬಾ ಜಾನೂ :**

ಅಂಬಾ ಮಾದೇವನ ಮಗಳು, ಕಠೋರ ಮನಸ್ಸಿನವಳು ಶಾಲೆಯಲ್ಲಿನ ಸಹಪಾಟಿಯೊಬ್ಬಳು ಮಹಾರ್ ಎಂದಿದ್ದಕ್ಕೆ ತಿರುಗಿ ಎದುರು ಮಾತಾಡಿದವಳು ಮತ್ತು ತಂದೆಗೆ ದೂರು ನೀಡಿದ್ದಳು. ತಂದೆಯು ಜನ್ಮ ರಹಸ್ಯ ತಿಳಿದು ಮನೆಯನ್ನು ಬಿಟ್ಟು ಹೋಗಿ ಪುನಃ ಬಂದಾಗ ನಿಮ್ಮ ಜಾತ್ಯೇಕಿನ ಮದುವೆ ಆದೆಯೋ ಎಂದು ಕೇಳಿದ ಚತುರಳು. ಜಾನೂ ಮಾದೇವನ ಮಗ ಜಾತಿಯ ಪ್ರಭಾವ ಹೇಗಾಗುತ್ತದೆ ಎಂಬುದನ್ನು ಈ ಮೂಲಕ ತೋರಿಸಲಾಗಿದೆ.

**ವಾಘಮೋರೆ :**

ಮಾದೇವನ ಸಹೋದ್ಯೋಗಿ ಈತ ಮರಾಠಿಯವನು ಮಾದೇವನಿಗೆ ಆಫೀಸಿನ ನಿಬಂರ್ಧನೆಗಳ ಬಗ್ಗೆ ಹೇಳುತ್ತಿದ್ದನು. ಮಾದೇವನು ನಾನು ಮಹಾರ್‌ನಲ್ಲ ನನಗೆ ಹೆಣ್ಣು ನೋಡಿ ಅಂದಾಗ ಹುಚ್ಚು ಗಿಚ್ಚು ಹಿಡಿದ್ಯೆತ ಈರೀತಿ ಮಾತಾಡಬೇಡ ಇರುವುದೊಂದ ನೌಕರಿ ಹೊರಟು ಹೋಗುತ್ತದೆ. ಎಂದು ಬೈಯುತ್ತ ಬುದ್ಧಿವಾದ ಹೇಳುತ್ತಾನೆ.

**ಪುಣೇಕರ :**

ಮಾದೇವ ಕೆಲಸಮಾಡುತ್ತಿದ್ದ ಕಛೇರಿಯಲ್ಲಿನ ಅಧಿಕಾರಿ (ಮ್ಯಾನೇಜರ್) ಇವನು ಶಿಸ್ತನ್ನು ಮೈಗೂಡಿಸಿಕೊಂಡಿದ್ದನು. ಯಾವುದೇ ಅಳುಕಿಲ್ಲದೆ ಮಾತಾಡುತ್ತಿದ್ದಾನೆ ಆದರೆ ಅಷ್ಟೆ ಮುಗ್ದನಾಗಿದ್ದ ಅಧಿಕಾರಿ.

**ಪಾಟೀಲ್ :**

ಮಹದೇವನ ಸಹೋದ್ಯೋಗಿ, ಎಲ್ಲಾ ಜಾತಿ ಬಡವರನ್ನು ಸರಕಾರ ಯಾಕೆ ಸಮನಾಗಿ ನೋಡಂಗಿಲ್ಲ ಒಂದೇ ಜಾತಿಯವರೇ ದಲಿತರೇ ಅಥವಾ ಬಡವರೇ ಎಂದು ಮಾದೇವನಿಗೆ ಕೇಳಿದವನು. ಅದಕ್ಕೆ ಮಾದೇವ ಸಮರ್ಥವಾಗಿ ಉತ್ತರಿಸಿದನು.

**ಕೋಲ್ಕಾರ :**

ಮಾದೇವನ ಸಹೋದ್ಯೋಗಿ ಮಹದೇವ ನಾನು ಮಹಾರ್‌ನಲ್ಲ ಎಂದಾಗ ಟೀಕಿಸಿದವನು. ಅಂಬೇಡ್ಕರ್ ಬಗ್ಗೆ ತಿಳಿದುಕೊಂಡಿದ್ದನು. ಮನೆಯಲ್ಲಿ ತಾಯಿ ಹೇಳುವ ಮಾತುಗಳಿಗೆ ಕಿವಿಗೊಡದೆ ಹೋರಾಟದಲ್ಲಿ ತೊಡಗಿದವನು. ಯಾವುದೇ ಮೂಢನಂಬಿಕೆ ಆಚರಣೆಗಳಲ್ಲಿ ನಂಬಿಕೆ ಇಲ್ಲದವನು. ಇವನ ಪ್ರಭಾವವೇ ಮಾದೇವನಿಗೆ ಆಗಿತ್ತು.

ಕೋಲ್ಕಾರ ಅಂಬೇಡ್ಕರ ಬಗ್ಗೆ ಸ್ವಲ್ಪ ಓದಿಕೊಂಡಿದ್ದರೂ ಚೆನ್ನಾಗಿ ಅರಿತುಕೊಂಡಿದ್ದ. ಮನೆಯಲ್ಲಿ ತಾಯಿ ಅಂತಹ ಹೋರಾಟಗಳನ್ನು ಬಿಡು ಹಿಂದೆ ನಿಮ್ಮ ತಂದೆ ಸಹ ಇದೇ ರೀತಿಯಲ್ಲಿ ತಿರುಗಾಡುತ್ತಿದ್ದ

ಆದರೂ ಜನರು ಅದನ್ನು ತಪ್ಪಾಗಿ ಭಾವಿಸಿ ಅವನನ್ನು ಒಂದು ಕಡೆ ಮಾಡಿದರು. ಜನರೆಲ್ಲ ಒಂದಾಗಿ ಹೊಡೆದಾಡಲು ಸಿದ್ಧರಾಗಿದ್ದರು. ಅದೃಷ್ಟವಶಾತ ನಿಮ್ಮಪ್ಪ ಉಳುದ ಇಲ್ಲದಿದ್ದರೆ ನೀನೆಲ್ಲಿ ಹುಟ್ಟುತ್ತಿದ್ದಿ ಅದಕ್ಕೆ ದೇವರಿಗೆ ಬೈಯ್ಯ ಬ್ಯಾಡಾ ಎಂದು ಪರಿಪರಿಯಾಗಿ ಬೇಡಿದರೂ ಕೋಲ್ಕಾರ ಲಕ್ಷಿಸಲಿಲ್ಲ. ತಾಯಿ ಹೆಂಡತಿ ಇಬ್ಬರು ಸೇರಿ ಗೊತ್ತಾಗದಂಗೆ ಮಕ್ಕಳನ್ನು ಗುಡಿಗೆ ಒಯ್ದರ ನಿಮ್ಮ ಜಿಪರಿ ಕಿತ್ತೀನ ನೋಡೆಂದು ಧಮಕಿ ಹಾಕುತ್ತಿದ್ದ.

**ಕುಲಕರ್ಣಿ :**

ಆಫೀಸನಲ್ಲಿ ಇರುವ ಕಿರಿಯ ಸಹಾಯಕ ಆಫೀಸನಲ್ಲಿ ಮಾದೇವನ ಜಾತಿ ಪ್ರಸ್ತಾಪ ಬಂದಾಗ ''ಅಲ್ರಿ ಕಾಂಬಳೇ ನಿಮ್ಮ ಅಡ್ಡ ಹೆಸರು ಜಾತಿ ವಾಚಕ ಅಥ ಜಾತಿ ಕೇಳಿದರ ಮರಾಠಾ ಅಂತೀದಿರಿ ನೀವು ನಿಮ್ಮ ಸರನೇಮ ಬದ್ಲಿ ಮಾಡಿಕೊರ್ರಿ ಇಲ್ಲಾಂದ್ರಾ ಜಾತೀಯರ ಬದ್ಲಿ ಮಾಡಿಕೊರ್ರಿ'' ಎಂದು ಕುಲಕರ್ಣಿ ಯಥಾಪ್ರಕಾರ ಒಂದೆರಡು ಸಲಹೆ ಕೊಟ್ಟು ಅದರಾಗೇನೈತ್ರೀ ಕಾಂಬಳೇ, ಭೀಮರಾವ ಅಂಬೇಡ್ಕರ ಅವರ ಮೂಲ ಸ್ಥಳ ಅಂಬೇವಾಡಿ ಹೀಗಾಗಿ ಅವರ ಮೇಷ್ಟ್ರು ಅಂಬೇಡ್ಕರ ಅಂತ ಹೆಸರಿಟ್ಟರು. ನಿಮ್ಮ ಮೂಲ ಸ್ಥಳ, ಕುರುಂದವಾಡ ಅಂದ್ರ ನೀವೂ ನಿಮ್ಮ ಸರನೇಮ್ ಕುರುಂದವಾಡಕರ್ ಅಂತ ಇಟಗೊಳ್ರಿ'' ಎನ್ನುತ್ತಾನೆ.

**ತುಳಸವ್ವ ವಿಮಲಿ :**

ಇವರು ತಾಯಿ ಮಗಳು ತುಳಸವ್ವ ತನಗೆ ಗಂಡು ಮಕ್ಕಳಿಲ್ಲದ್ದಕ್ಕಾಗಿ ತಮ್ಮ ಮಗಳು ವಿಮಲಿಯನ್ನು ಜೋಗತಿ ಬಿಟ್ಟಿದ್ದಳು. ಶುಕ್ರವಾರ ಮತ್ತು ಮಂಗಳವಾರಕ್ಕೊಮ್ಮೆ ಕೈಯಲ್ಲಿ ಪಡ್ಲಗಿ ಹಿಡಿದುಕೊಂಡು ''ಅಕ್ಕಲಿಗೇ, ಜೋಗ,'' ಎಂದು ಮನೆ ಮನೆಗೆ ತಿರುಗಿ ಭಿಕ್ಷೆ ಬೇಡುತ್ತ, ಭಂಡಾರ ಹಚ್ಚುತ್ತಾ ತಿರುಗುತ್ತಿದ್ದರು.

ತುಳಸವ್ವ ಮತ್ತು ಆಕೆಯ ಮಗಳು ವಿಮಲಿ, ಬರೇ ಜೋಗಾಡಿದ್ದರೆ ಒಳ್ಳೆಯದಾಗುತ್ತಿತ್ತು. ಆದರೆ ಮೈಯಲ್ಲಿ ಯೌವ್ವನ ಉಕ್ಕುತ್ತಿದ್ದ ವಿಮಲಿ ಖಾಯಂ ಆಗಿ ಮರಾಠೇರ ಬಾಬ್ಯಾನನ್ನು ಇಟ್ಟುಕೊಂಡಿದ್ದಳು. ಜೋಗಾಡಲಿಕ್ಕೆ ಹೋದಾಗ ಹೊಸ ಗಿರಾಕಿಗಳನ್ನು ಸಹ ಹುಡುಕಿಕೊಂಡು ಬರುತ್ತಿದ್ದಳು. ಇದರಿಂದ ಆಕೆಯ ದಂಧೆ ವಡಗಾಂವಿ ಅಲ್ಲ ಬೆಳಗಾವಿ ಹೋಟೇಲ್ ಲಾಡ್ಜಿಂಗ್‌ನ ಕೋಣೆಗಳೂ ಅವಳಿಗೆ ಬುಕ್ ಆಗುತ್ತಿದ್ದವು. ಇದೆಲ್ಲ ನೋಡಿ ಮಾದೇವನಿಗೆ ಮತ್ತು ಸಹಚರರಿಗೆ ಸಹಿಸಲು ಆಗುತ್ತಿರಲಿಲ್ಲ ಹಾಗೆಯೇ ನುಂಗಿಕೊಂಡಿದ್ದರು. ಒಮ್ಮೆ ಜಗಳವಾಡುತ್ತಿದ್ದಾಗ ಮಾದೇವನ ಜನ್ಮವೃತ್ತಾಂತವನ್ನು ತಿಳಿಸುತ್ತಾ ಬೈದಳು ಅಂದಿನಿಂದ ಮಾದೇವನಿಗೆ ತನ್ನ ಜನ್ಮರಹಸ್ಯವನ್ನು ತಿಳಿದುಕೊಳ್ಳುವ ಬಯಕೆ ಉಂಟಾಯಿತು.

**ಖಂಡೋಬಾ :**

ಕೇರಿಯ ಹಿರಿಯ ಮನುಷ್ಯ ಜಾನೂಬಾನ ಕುಟುಂಬಕ್ಕೆ ಭಾವನಾತ್ಮಕವಾಗಿ ತುಂಬಾ ಹತ್ತಿರವಾಗಿದ್ದನು. ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದನು. ಮಾದೇವನು ತನ್ನ ಜನ್ಮ ರಹಸ್ಯ

ತಿಳಿಯಲು ಖಂಡೋಬಾನನ್ನು ರಾತ್ರಿಯಲ್ಲಿಯೇ ಕರಿಸುತ್ತಾನೆ. ಖಂಡೋಬಾ ನೋಡಪ್ಪಾ ನಿನ್ನ ಅಪ್ಪನಿಂದ ವಚನ ತಗೊಂಡಿನಿ ಹೇಳಲ್ಲ ಅಂತ ನೀನು ಎಂಥಾ ಪರಿಸ್ಥಿತಿಯಲ್ಲೂ ಸುಮಕ್ಕನ ಕೈಬಿಡಲ್ಲ ಅಂತೇಳು ಮಾತ ಕೊಡು ಅಂದರೇನೇ ನಿನ್ನ ಜನ್ಮ ಬಗ್ಗೆ ಹೇಳುವೆ. ಎನ್ನುತ್ತಾ ನೀನು ರಾಜಾಗೆ ಹುಟ್ಟಿದ್ದು ನಿಜ. ನೀನು ಅಲ್ಲಿಯೇ ಇದ್ದಿದ್ದರೇ ಜೀವಂತ ಉಳಿಯುತ್ತಿರಲಿಲ್ಲ. ನಿನ್ನ ಚಿಕ್ಕಪ್ಪ ಸಂಭಾಜಿರಾವನೇ ಕೊಲ್ಲಲು ಪ್ರಯತ್ನಿಸಿದ್ದನಂತೆ ಅದಕ್ಕೆ ನಾನಾಸಾಹೇಬ ಎಂಬ ನಿಮ್ಮಪ್ಪನ ಆಪ್ತಸಹಾಯಕ ತಂದು ಹೊಲಗೇರಿಯಲ್ಲಿ ಹೀರಾಬಾಯಿ ಜಾನೂಬಾಗೆ ಕೊಟ್ಟುಹೋಗಿದ್ದಾನೆ. ಅದಕ್ಕೆ ಸಾಕಿದವರನ್ನು ಜರಿಯಬೇಡ ಎನ್ನುತ್ತಾನೆ.

**ಜಾನೂಬಾ :**

ಮಾದೇವನ ಸಾಕು ತಂದೆ ನಾನಾಸಹೇಬ ಮಾದೇವನನ್ನು ಇವನಿಗೆ ಒಪ್ಪಿಸಿದ ನಂತರ ಅವನ ಪಾಲನೆ ಪೋಷಣೆ ಮಾಡಿದವನು. ಪೋಷಣೆಗೆ ತಕ್ಕ ಪ್ರತಿಫಲವನ್ನು ಮಾದೇವನು ನೀಡಿದ್ದರಿಂದ ಜಾನೂಬಾ ಗರ್ವದಿಂದ ಮೆರೆದನು. ಹೊಲಗೇರಿಯಲ್ಲಿ ಬೇಷ್ ಎನಿಸಿಕೊಂಡನು ಕೇರಿಯಲ್ಲಿ ಎಲ್ಲಾ ಜನರ ಪ್ರೀತಿ ವಿಶ್ವಾಸಗಳಿಸಿದ್ದನು. ಅಷ್ಟೇ ತ್ವರಿತವಾಗಿ ಕಾಯಿಲೆಯಿಂದ ಅಸುನೀಗಿದನು.

**ಹೀರಾಬಾಯಿ :**

ಮಾದೇವನ ಸಾಕುತಾಯಿ ಮಾದೇವ ಕೂಸಾಗಿದ್ದಾಗ ಅವನನ್ನು ದೇವರೆ ತನಗೆ ಕರುಣಿಸಿದ ಮಗುವೆಂದು ಪೋಷಣೆ ಮಾಡಿದಳು. ತಾಯಿ ಕರುಳು ಕೂಸನ್ನು ಉಳಿಸಲು ಒಪ್ಪಿಕೊಂಡಿತು. ಕೂಸಿನ ಬೆಳವಣಿಗೆ ಕಂಡು ಹಿಗ್ಗಿದರು. ಮಗು ಬೆಳೆದ ಮೇಲೆ ಮದುವೆ ಮಾಡಿ ಅದಕ್ಕೆ ಮಕ್ಕಳಾಗಲಿ ದೇವರಲ್ಲಿ ಬೇಡಿಕೊಂಡಿದ್ದಳು. ಸೊಸೆ ಸುಮತಿಯೊಂದಿಗೆ ತುಂಬಾ ಆತ್ಮೀಯವಾಗಿದ್ದಳು. ಮಗ ಮಾದೇವನ ಬಗ್ಗೆ ಅಪಾರ ಪ್ರೀತಿ ಹೊಂದಿರುವುದನ್ನು ತನ್ನ ಭಾವನಾತ್ಮಕ ಮಾತುಗಳಿಂದ ತಿಳಿಯಲಾಗುತ್ತದೆ. ಹೀರಾಬಾಯಿ ಮತ್ತು ಜಾನೂಬಾ ಮಗನ ಜನ್ಮಹರಸ್ಯದ ಬಗ್ಗೆ ಆಗಾಗ ಮಾತಾಡುತ್ತಿದ್ದರು. ಹೀರಾಬಾಯಿಯವರ ಸಾವನ್ನು ನಿಖರವಾಗಿ ಕಾದಂಬರಿಕಾರರು ತಿಳಿಸಿಲ್ಲ ಎಂದು ಹೇಳಬಹುದು.

**ರಾವಶ್ಯ ಪರಶ್ಯಾ :**

ಕೇರಿಯ ಜನ ಮಾದೇವನ ಸಹಾಯಕ್ಕೆ ಆಗಾಗ್ಗೆ ಬರುತ್ತಿದ್ದರು. ಮಾದೇವ ಮತ್ತು ಸುಮತಿಗೂ ಅಣ್ಣಂದಿರಂತೆ ಇದ್ದರು. ಮಾದೇವನ ತಂದೆಗೆ ವೈದ್ಯರತ್ತಿರ ತೋರಿಸುವಲ್ಲಿ, ಸಹಾಯಕರಾಗಿದ್ದರು. ಸುಮತಿಯು ಗರ್ಭಿಣಿಯಾಗಿದ್ದಾಗ ಆಕೆಗೆ ಬೇಕಾದ ತಿಂಡಿ ತಿನಿಸುಗಳನ್ನು ಮಾಸವನ್ನು ತಂದು ಕೊಡುವಲ್ಲಿ ನಿಸ್ಸೀಮರಾಗಿದ್ದರು. ಇದರಿಂದ ಕುಟುಂಬದ ಸದಸ್ಯರೆಂಬಂತೆ ವರ್ತಿಸುತ್ತಿದ್ದರು ಎನ್ನಬಹುದು.

**ಅರ್ಜುನರಾವ್ ಕರಾಡಕರ, ಕಾಕಾಸಾಹೇಬ :**

ಅರ್ಜುನರಾವ ಕರಾಡಕರ ಅಂತ ಒಬ್ಬ ಹಮಾಲಿ, ಮಾದೇವನು ಕುರುಂದವಾಡದಲ್ಲಿ ತನ್ನ ಜನ್ಮರಹಸ್ಯ ತಿಳಿಯಲು ಬಂದಾಗ ಅದು ನಾನಾಸಾಹೇಬನಿಗೆ ಗೊತ್ತು ಎಂತೇಳಿ ಕಾಕಾಸಾಹೇಬನನ್ನು

ಪರಿಚಯ ಮಾಡಿಸಿದನು. ಕಾಕಾಸಾಹೇಬನನಿಂದ ಎಲ್ಲಾ ವಿವರ ತಿಳಿಯಲಾಯಿತು. ಮಾದೇವನ ತನ್ನ ಅತ್ತೆ ಅಹಲ್ಯಾಬಾಯಿಯನ್ನು ಮಾತಾಡಿಸಿ ನೋವು ತೋಡಿಕೊಂಡು ಪುನಃ ಅದೇ ನೋವಿನಿಂದ ಅರ್ಜುನರಾವ್ ಕರಾಡಕರ್‌ನಿಗೆ ೨೦ ರೂಪಾಯಿ ಕೊಟ್ಟು ಹೊರಟುಹೋದನು.

**ಅಹಲ್ಯಾಬಾಯಿ :**

ಈಕೆ ಮಾದೇವನ ಸೋದರತ್ತೆ. ಮಾದೇವ ತನ್ನ ಪರಿಚಯ ಹೇಳಿಕೊಂಡ ಮೇಲೆ ಅಹಲ್ಯಾಬಾಯಿಯ ಮುಖದ ಮೇಲೆ ಕ್ಷತ್ರೀಯ ಕುಲದ ಅಸ್ಮಿತೆ ರಾರಾಜಿಸುತ್ತಿತ್ತು. ಕುರುಂದವಾಡದಲ್ಲಿ ಯಾರಿಗೇ ಮಾತನಾಡುದಿರಲಿ ಕಾಯರೆ ಕಸರ್ರ ಎಂದೇ ಸಂಭೋದಿಸುತ್ತಿದ್ದಳು. ಸಾವಿರಾರು ವರ್ಷ ನಮ್ಮ ಮನೆಯ ಬಾಗಿಲು ಕಿಡಕಿಗಳನ್ನು ಕಾಣದವರು ಈಗ ಮನೆ ಹೊಕ್ಕು ನಮ್ಮ ಹೆಣ್ಣುಗಳನ್ನು ಓಡಿಸಿಕೊಂಡು ಹೋಗುತ್ತಿದ್ದಾರೆ ಎಂದು ಕೆರಳಿ ಕೆಂಡವಾಗುತ್ತಿದ್ದಳು. ಇಲ್ಲಿ ಹೇಳಬೇಕೆಂದರೆ ಅಹಲ್ಯಾಬಾಯಿ ಯೋಚಿಸಿದಳು, ಇವನಿಗೆ ತನ್ನ ತಂದೆ ತಾಯಿಯರ ಮೇಲೆ ಕಿಷ್ಟು ಪ್ರೀತಿ ಅವರೇನು ಇವನನ್ನು ಉಳಿಸಲಿಲ್ಲ, ಬೆಳೆಸಲಿಲ್ಲ, ಆದರೂ ಪ್ರೀತಿ ಪ್ರೇಮ ಇದೆ. ನನ್ನ ಮಕ್ಕಳಿಗೇಕೆ ಪ್ರೀತಿಯಿಲ್ಲ ಮದುವೆ ಮಾಡಿಕೊಂಡು ಹೋದವನು ಇನ್ನು ಬರಲೇ ಇಲ್ಲ. ಹೊಲೆಯ ಸಂಸ್ಕೃತಿಯು ನಮ್ಮ ಸಂಸ್ಕೃತಿಯ ಮೇಲೆ ಪ್ರಭಾವ ಬೀರುತ್ತದೆಯೇ ಎಂಬ ಯೋಚನೆಯಲ್ಲಿಯೇ ಫೋಟೋ (ತಂದೆ ತಾಯಿ) ತಂದು ತೋರಿಸುವಳು.

**ಪ್ರೊ.ಕದಂ ಮತ್ತು ಪ್ರೊ. ಶಿಂಧೆ :**

ಪ್ರೊ.ಕದಂ ಶಿವಾಜಿ ವಿದ್ಯಾಪೀಠದ ಪ್ರಾಧ್ಯಾಪಕರಾಗಿದ್ದರು. ಇವರು ಜಾತಿ ವರ್ತುಲಕ್ಕೆ ಸೀಮಿತ ಮಾಡಿಕೊಳ್ಳದೆ ಬಾಬಾ ಸಾಹೇಬರನ್ನು ಅರ್ಥೈಸಿಕೊಂಡು ಬದುಕುವುದನ್ನು ಕಲಿಯಿರಿ ಎಂದು ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು. ಪ್ರೊ. ಶಿಂಧೆಯವರು ಶಿವಾಜಿ ವ್ಯಾಪೀಠದ ಮತ್ತೊಬ್ಬ ಪ್ರಾಧ್ಯಾಪಕರು ಜಾತಿಯಿಂದ ಎಸ್ಸಿ ಆದರೂ ಅವರು ಚಳುವಳಿಗೆ ಸ್ಪಂದಿಸುತ್ತಿರಲಿಲ್ಲ. ಇದನ್ನು ಕಂಡು ಪ್ರೊ. ಕದಂ ಅವರು ಟೀಕಿಸುತ್ತಿದ್ದರು.

**ಪರೋಕ್ಷ ಪಾತ್ರಗಳು :**

ಅಚ್ಯುತರಾವ ಗಾಯಕವಾಡ, ನೇಮಾಡೆ, ಕುರುಂದವಾಡಕರ್, ಒಣಮುಕಳಿ ಸಾಹುಕಾರ, ಚಂದ್ರವ್ವ, ಮರೆಪ್ಪ, ಸಾಯನಾಕಗೋಳಪರಶುರಾಮ ಸಂಭಾಜಿರಾವ, ದೇವಕಿ, ಯಶೋದರೆ, ಕೃಷ್ಣ, ದುರ್ಗವ್ವ, ದಗಡು, ಅನುಷಾಪಾಂಡೆ, ಕರೆಪ್ಪಜ್ಜ, ರಂಗವ್ವ, ಗಾಡಿಗೀಳ, ಜೋಶಿ, ದೀಕ್ಷಿತ ದೇಶಪಾಂಡೆ, ಸಂಜೀವ ಕುಲಕರ್ಣಿ, ಗೊಲ್ಪೆ, ಗಾಯ್ತೊಂಡೆ, ಮಿರಜಕರ,ಲಿಂಗರಾಜ, ರಾಘು, ವಾಂಖೇಡೆ, ಸಪ್ಲಾಯರ್ (ಹೋಟಲ್) ಮಿಲ್ಪಿ ಮಾದೇವನ ಗುಡಿ, ಸೇಲ್ಸ್‌ಮನ್, ಡಾಕ್ಟರ್, ಸೀತೆ, ದ್ರೌಪದಿ, ಯಮ, ಸತ್ಯವಾನ್, ಸಾವಿತ್ರಿ, ಕೊರವಂಜಿಗಳು, ಸುಡುಗಾಡು ಸಿದ್ಧರು, ಕುರ್ರಮಾಮಾಗಳು, ಹಣಮಂತ ದೇವರ

ಪೂಜಾರಿ, ಗುಡ್ಡದ ಎಲ್ಲಮ್ಮ, ಫಕೀರವ್ವ, ಅಂಬಾಬಾಯಿ, ದಾನಮ್ಮ, ಸಕಾರಾಮ, ಮಾಳಮಾರುತಿ ಹಣಮಂತ ದೇವರು, ಸವದತ್ತಿ ಎಲ್ಲಮ್ಮ, ಪಂಡರಾಪುರ ವಿಠಲ ರುಕ್ಮಿಣಿ ಪಾರ್ವತಿ ಪರಮೇಶ್ವರ, ಶಿರಡಿ ಸಾಯಿಬಾಬಾ, ಅಂಬೇಡ್ಕರ್, ಗಾಂಧೀ ಜೋತಿಭಾ ಫುಲೆ, ಸಾಹು ಮಹಾರಾಜ, ಗುಡ್ಡಾಪುರದ ದಾನಮ್ಮ, ಕೊಲ್ಲಾಪುರದ ಅಂಬಾಭವಾನಿ, ಭೀಮಶ್ಯಾ, ಸಾವಿತ್ರಿ, ಇನ್ಸ್‌ಪೆಕ್ಟರ್, ಗಾಯಕವಾಡ್, ಸಾಂಗ್ಲಿಕರ್,

ಹೀಗೆ ಹೊಲಗೇರಿಯ ರಾಜಕುಮಾರ ಕಾದಂಬರಿಯಲ್ಲಿ ಬರುವ ಪಾತ್ರಗಳು ಬಹಳ ಗಟ್ಟಿತನದಿಂದ ಕೂಡಿವೆ. ಕಾದಂಬರಿಕಾರರು ಪ್ರಾದೇಶಿಕವಾದ ವ್ಯಕ್ತಿ ನಾಮಗಳನ್ನೇ ಬಳಸಿದ್ದಾರೆ. ಮಾದೇವನನ್ನು ಕಥಾನಾಯಕ ಮೂರು ಪಾತ್ರಗಳಲ್ಲಿ ಹೇಳಿದ್ದಾರೆ ಒಂದು ಮಾದೇವ ಹೊಲೆಯ, ಎರಡು ಕುರುಂದ ವಾಡಕರ್, ಮೂರು ಮಾಧವರಾವ ಗಾಯಕವಾಡ (ಕ್ಷತ್ರೀಯ) ಮರಾಠ. ವ್ಯಕ್ತಿಯ ವೃತ್ತಿಯ ಹೆಸರುಗಳು ಕೆಲವು ಕಡೆ ಕಾಣಿಸಿಕೊಂಡಿದ್ದರಿಂದ ಕಾದಂಬರಿಗೆ ಇನ್ನಿಷ್ಟು ಮೆರಗು ಬಂದಿದೆ. ಪಾತ್ರಗಳು ಗ್ರಾಮೀಣ ಪ್ರದೇಶದ ಸಹಜತ್ವವನ್ನು ನೈಜವಾಗಿ ಪ್ರತಿಬಿಂಬಿಸುತ್ತವೆ. ಈ ಹಿನ್ನೆಲೆಯಲ್ಲಿ ಕಾದಂಬರಿ ಪ್ರಾದೇಶಿಕತೆಯನ್ನು ನೆನಸುತ್ತದೆ. ಚಿಕ್ಕೋಡಿ ಮತ್ತು ರಾಯಭಾಗ ಪ್ರದೇಶದ ಭಾಷೆಯನ್ನು ಪ್ರಸ್ತಾಪಿಸುತ್ತದೆ.

# ಅಧ್ಯಾಯ ೪

# ಭಾಷೆ ಮತ್ತು ಶೈಲಿ

ಸಹಸ್ರ ವರ್ಷಗಳ ಇತಿಹಾಸವನ್ನು ಹೊಂದಿರುವ ಭಾಷೆ ಕ್ರಿ.ಪೂ. ದಿಂದ ಹಿಡಿದು ಇಂದಿನವರೆಗೂ ತನ್ನದೇ ಆದ ಬೆಳವಣಿಗೆ ಬದಲಾವಣೆಯ ಆದಿಯಲ್ಲಿ ನಡೆದಿದೆ ಮತ್ತು ನಡೆದು ಬರುತ್ತದೆ. ಭಾಷೆಗೆ ನಿರ್ದಿಷ್ಟ ನಿಲುಗಡೆ ಇಲ್ಲ, ನಿತ್ಯ ನಿರಂತರವಾಗಿಯೂ ಹೊಸತನ್ನು ಪಡೆಯುವುದಾಗಿದೆ. ಅದೇ ವೈಚಾರಿಕತೆಯನ್ನು ಗಮನಿಸಿ ಇಲ್ಲಿ ಕಾದಂಬರಿಕಾರರು ಬಳಸಿರುವ ವಸ್ತು, ಭಾಷೆ, ತಂತ್ರ ಮತ್ತು ನಿರೂಪಿಸುವ ಶೈಲಿ ಪರಿಣಾಮಕಾರಿಯಾಗಿದೆ.

## ಭಾಷೆ

ಭಾಷೆಗೆ ಸಂಬಂಧಿಸಿದಂತೆ ಹೇಳುವುದಾದರೆ ಕಾದಂಬರಿಯಲ್ಲಿ ಬಳಸಿದ ಭಾಷೆ ಬೆಳಗಾವಿಯ ಚಿಕ್ಕೋಡಿ ಮತ್ತು ರಾಯಭಾಗ ಕಡೆಯದ್ದು. ಜೊತೆಗೆ ಸಾಂದರ್ಭಿಕವಾಗಿ ಇನ್ನಿತರ ಪದಗಳನ್ನು ಬಳಸಲಾಗಿದೆ. ಕಾದಂಬರಿ ಆ ಪ್ರಾದೇಶಿಕ ಭಾಷಾ ಸ್ವರೂಪವನ್ನು ಸಶಕ್ತವಾಗಿ ಹಿಡಿದಿಟ್ಟಿದೆ. ಸಾಮಾಜಿಕ ಭಾಷಾ ರೂಪಗಳು, ಗ್ರಾಮ್ಯರೂಪಗಳು ಮರಾಠಿ ಭಾಷಾ ಮಿಶ್ರಣದ ಜೊತೆಗೆ ಆಧುನೀಕರಣದ ಫಲವಾಗಿ ಬಂದಿರುವಂತಹ ಇಂಗ್ಲೀಷಿನ ಪದಗಳು ಹೇರಳವಾಗಿ ಬಳಕೆಯಾಗಿವೆ.

ಉಪಭಾಷೆ, ಅನ್ಯಭಾಷೆಗಳೊಂದಿಗೆ ಸಾಂಸ್ಕೃತಿಕ ಸಹಚರ್ಯವನ್ನು ಏರ್ಪಡಿಸಿದ್ದಾರೆ. ಕಾದಂಬರಿಕಾರರು ಭಾಷೆಯ ಸ್ವರೂಪವನ್ನು ಗಮನಿಸಿ ಕೃಷಿ ಮಾಡಿದ್ದಾರೆ. ಭಾಷೆಯ ಒಂದು ಜನಾಂಗದ ಸಾಂಸ್ಕೃತಿಕ ಸ್ವರೂಪವನ್ನು ತಿಳಿಸುತ್ತದೆ. ಇತಿಹಾಸ ತಿಳಿಯಬೇಕಾದರೂ ಸಾಹಿತ್ಯ ಬೇಕು. ಆ ಸಾಹಿತ್ಯವು ಆಯಾ ಭಾಷಾ ಮೂಲವೇ ಆಗಿರುತ್ತದೆ. ಅದಕ್ಕೆ ಕಾದಂಬರಿಕಾರರು ಭಾಷೆಯನ್ನು ಅಚ್ಚುಕಟ್ಟಾಗಿ ನಿರೂಪಣೆ, ಸಂಭಾಷಣೆ, ಶೈಲಿ ಹೀಗೆ ಎಲ್ಲವನ್ನು ಹಿತಮಿತವಾಗಿ ಬಳಸಿದ್ದಾರೆ. ಎಲ್ಲಕ್ಕೂ ಭಾಷೆಯೇ ಮುಖ್ಯ ಆಧಾರವಾಗಿರುವುದರಿಂದ ಒಂದು ಸಮುದಾಯದ ಸಂಸ್ಕೃತಿಯನ್ನು ಬರಹಗಾರನ ಆಶಯವನ್ನು ಅವನು ಬಳಸಿದ ಭಾಷೆಯೇ ತಿಳಿಸುತ್ತದೆ. ಇದಕ್ಕೆ 'ಹೊಲಗೇರಿ ರಾಜಕುಮಾರ' ಕಾದಂಬರಿ ಹೊರತಾಗಿಲ್ಲ.

ಲೇಖಕರು ಕಾದಂಬರಿಯಲ್ಲಿ ಬಳಸಿದ ಗ್ರಾಮ್ಯ ಆಡುನುಡಿಗಳು ತುಂಬಾ ವಿಶೇಷವಾಗಿವೆ. ಅವರು ಆಯ್ದುಕೊಂಡ ವಸ್ತುವಿಷಯ ಬೆಳಗಾವಿಯ ಪರಿಸರದ್ದು, ತಮ್ಮ ಸೃಜನಶೀಲತೆಯ ಬರವಣಿಗೆಯಿಂದ ಗ್ರಾಮೀಣ ಸೊಗಡಿನ ಭಾಷಾ ಪ್ರಯೋಗದ ಮೂಲಕ ಪ್ರಾದೇಶಿಕ ವಿಶಿಷ್ಟ ಪದಗಳನ್ನು ಕಥನದ ಪಾತ್ರ ಸಂಭಾಷಣೆಯಲ್ಲಿ ನಿರೂಪಿಸಿದ್ದಾರೆ. ಅಲ್ಲದೆ ಅವರ ವಿಶಿಷ್ಟ ಭಾಷಾಲಯದಿಂದ ಓದುಗರನ್ನು ಸೆಳೆದಿದ್ದಾರೆ.

ಈ ಅಧ್ಯಯನದಲ್ಲಿ ಡಾ. ಶಿವರುದ್ರ ಕೆ. ಕಲ್ಲೋಳಿಕರ ಅವರು ತಮ್ಮ ಕಾದಂಬರಿಯಲ್ಲಿ ಬಳಕೆ ಮಾಡಿದ ಭಾಷೆ ಮತ್ತು ಶೈಲಿಯನ್ನು ಕುರಿತು ವಿವೇಚಿಸಲಾಗಿದೆ.

## ಶೈಲಿ

ಭಾಷೆಯು ಒಂದು ಕೃತಿಗೆ ಎಷ್ಟು ಅವಶ್ಯಕವೋ ಅಷ್ಟೇ ಶೈಲಿಯೂ ಪ್ರಾಮುಖ್ಯವಾಗಿದೆ. ಶೈಲಿಯಲ್ಲಿ ವಸ್ತು, ಪಾತ್ರಗಳು, ಸಂಭಾಷಣೆ ಬರುತ್ತದೆ ಶೈಲಿಯನ್ನು ಆಂಗ್ಲಭಾಷೆಯಲ್ಲಿ 'ಸ್ಟೈಲ್' ಎಂದು ಸಂಬೋಧಿಸುವರು. ಈ ಶೈಲಿಯಲ್ಲಿ ಪ್ರಮುಖವಾಗಿ ವರ್ಣ, ಪದ, ವಾಕ್ಯ, ಅಲಂಕಾರ, ನಾಮಪದ, ಅನುಕರಣಾವ್ಯಯ, ದ್ವಿರುಕ್ತಿ, ಜೋಡುನುಡಿ ಹೀಗೆ ವ್ಯಾಕರಣಾಂಶಗಳು ಬರುತ್ತವೆ. ಇವುಗಳೇ ಕಥೆ, ಕಾದಂಬರಿ, ನಾಟಕಕ್ಕೆ ಮೆರಗನ್ನು ನೀಡುತ್ತವೆ. ಇವೆಲ್ಲವೂ 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ನಯವಾಗಿ ಬೆರೆತುಕೊಂಡಿವೆ.

ಕಾದಂಬರಿಯಲ್ಲಿ ಪ್ರಾದೇಶಿಕ ನುಡಿ ಬಳಸಿದ್ದರಿಂದ 'ಜನಪದ ಶೈಲಿ'ಯನ್ನು ಗಮನಿಸಬಹುದು ಅಲ್ಲಿನ ಸಂಭಾಷಣಾ 'ತಂತ್ರ' ನಿರಾಳ, ನಿರರ್ಗಳ, ನಿರಾಡಂಬರವಾಗಿದೆ. ಕಾದಂಬರಿಯ ಮುಖ್ಯ ವಸ್ತು ನಾಯಕ ಮಾದೇವ ಆಗಿರುತ್ತಾನೆ. ಅವನೇ ಕಥೆಯ ಮೂಲ ಪುರುಷನಾಗಿರುವನು.

## ಹೊಲಗೇರಿಯ ರಾಜಕುಮಾರ ಕಾದಂಬರಿಯ ಭಾಷೆ ಮತ್ತು (ಶೈಲಿ) ತಂತ್ರ ಕುರಿತಂತೆ ವಿದ್ವಾಂಸರ ಅಭಿಪ್ರಾಯ

ಕಾದಂಬರಿಯನ್ನು ಓದಿದ ವಿದ್ವಾಂಸರು ಕನ್ನಡ ಸಾಹಿತ್ಯದಲ್ಲಿ ಸ್ವಾಭಿಮಾನ ಮೂಡಿಸುವ ಕಾದಂಬರಿ, ವಿಭಿನ್ನ ನಿರೂಪಣಾ ತಂತ್ರದ ಕಾದಂಬರಿ, ಪ್ರಶಸ್ತಿ ಪುರಸ್ಕೃತ ಕಾದಂಬರಿ, ವಿಶಿಷ್ಟ ಬಗೆಯ ಕಾದಂಬರಿ ಮತ್ತು ಮುಖ್ಯವಾಗಿ ಸಾಮಾಜಿಕ ವ್ಯವಸ್ಥೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ಕಾದಂಬರಿಯಾಗಿದೆ ಎಂದು ಹೇಳಿದ್ದಾರೆ.

ಜೊತೆ ಜೊತೆಗೆ ಕನ್ನಡ (ಭಾಷಾ)ದ ಸ್ವರೂಪ ಕಾದಂಬರಿಯಲ್ಲಿ ಹೇಗೆ ಮೂಡಿಬಂದಿದೆ ಎಂಬುದನ್ನು ಕೆಲವು ಪಂಡಿತರು ತಮ್ಮದೇ ಗ್ರಹಿಕೆಯಲ್ಲಿ ಹೇಳಿದ್ದಾರೆ. ಡಾ. ಬಿ.ಎಂ.ಪುಟ್ಟಯ್ಯ ಅವರು ಬೆಳಗಾವಿಯ ಭಾಗದ ಭಾಷೆ ಕೆಲವೊಂದು ಕಡೆ ಪಾತ್ರ ಪೋಷಣೆಯ ಸಹಜತೆಗೆ ಅನುಗುಣವಾಗಿ ಬಂದಿದೆ. ಒಂದೊಂದು ಪಾತ್ರದ ಮೂಲಕ, ಒಂದೊಂದು ಘಟನೆಯ ಮೂಲಕ, ವ್ಯಕ್ತಿಗೆ ಎದುರಾಗುವ ಸಂದಿಗ್ಧ ಸಮಸ್ಯೆಗೆ

ಬದುಕಿನಿಂದ ನಿರಾಶೆಗೊಳ್ಳದೆ ಅದನ್ನು ಎದುರಿಸುವ ಶಕ್ತಿ ಕಾದಂಬರಿಯಲ್ಲಿದೆ ಎಂದು ಹೇಳಿದ್ದಾರೆ. (ಪುಸ್ತಕ ಮಾಹಿತಿ ಸೆಪ್ಟೆಂಬರ್ ೧೯೯೪.)

ವ್ಯಾಸರಾಯ ಬಲ್ಲಾಳರವರು (೩.೬.೧೯೯೪) ಕಾದಂಬರಿಯಲ್ಲಿ ಬಳಸಿದ ಬರವಣಿಗೆ ಶೈಲಿ ಭಾಷಾಶೈಲಿ ಮತ್ತು ಅಲ್ಲಿನ ವಿಷಯವಸ್ತು ಹೊಸತನದಿಂದ ಕೂಡಿದೆ. ಮಾತ್ರವಲ್ಲದೆ ಸರಳವಾದ ಶೈಲಿಯಲ್ಲಿ ಅತ್ಯಂತ ಆಕರ್ಷಕವಾಗಿ ರಚಿಸಲಾಗಿದೆ. ಒಂದು ವೈಚಾರಿಕ ಪ್ರಶ್ನೆಯನ್ನು ಎತ್ತಿಹಿಡಿದ್ದಾರೆ ಎಂದಿದ್ದಾರೆ. ನಾ. ಮೊಗಸಾಲೆ ಅವರು (೬.೬.೧೯೯೪) ಪ್ರಾಚೀನ ಕಾಲದಿಂದಲೂ ಕಾಯ್ದುಕೊಂಡು ಬಂದಿರುವ ಜಾತಿ ವ್ಯವಸ್ಥೆಯನ್ನು ಸಹಿಸಲಾರದೇ ಹೊರಬರಲಾಗದೇ ಬಳಲುತ್ತಿರುವ ವಿಪರ್ಯಾಸವನ್ನು ಕಾದಂಬರಿಕಾರರು ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ. ಪ್ರಾದೇಶಿಕ ಕನ್ನಡ (ಭಾಷೆಯ) ಸೊಗಡು ವಿನೂತನವಾಗಿ ಒಡಮೂಡಿದೆ.

ಬಾನಂದೂರು ಕೆಂಪಯ್ಯ (೮.೯.೧೯೯೪) ಅವರು 'ಅಕ್ರಮ ಸಂತಾನ' ಓದಿದ ತರುವಾಯ ಕೈ ಸೇರಿದ್ದ ಕಾದಂಬರಿ 'ಹೊಲೆಗೇರಿಯ ರಾಜಕುಮಾರ' ಇದು ದಲಿತ ಬರಹಗಾರರಿಂದ ಬಂದ ಮೊದಲ ಶ್ರೇಷ್ಠ ಕಾದಂಬರಿಯಾಗಿದೆ. ಬೆಳಗಾವಿ ಜಿಲ್ಲೆಯ ರಾಯಭಾಗ ತಾಲೂಕಿನ ಗಟ್ಟಿ ಕನ್ನಡ ಅಸ್ಪೃಶ್ಯ ಭಾಷೆ (ಪ್ರಾದೇಶಿಕ/ಗ್ರಾಮ್ಯ) ಕಾದಂಬರಿಗೆ ಶಿರವಾಗಿದೆ ಎಂದು ಹೇಳಿದ್ದಾರೆ.

ರಾಜಪ್ಪ ದಳವಾಯಿ (೨.೮.೧೯೯೫) ಅವರು ಅಕ್ರಮ ಸಂತಾನ, ಉಚಲ್ಯಾ, ಗೌರ್ಮೆಂಟ ಬ್ರಾಹ್ಮಣ ಕೃತಿಗಳ ನಂತರ ಮನಸ್ಸನ್ನು ಹೆಚ್ಚು ಕಾಡಿದ್ದು ಈ ಹೊಲೆಗೇರಿ ರಾಜಕುಮಾರ ಕಾದಂಬರಿ ಎಂದು ಅಲ್ಲಿನ 'ಭಾಷೆ' ಅದರ ಸತ್ವ, ಅದು ಬಿಟ್ಟು ಕೊಡುವ ಸಾಂಸ್ಕೃತಿಕ ಚಿತ್ರಣ ಚಿತ್ರಿಸುವ ಬಲ ಕಾದಂಬರಿಗಿದೆ ಎಂದು ಹೇಳಿದ್ದಾರೆ.

ಈ ಎಲ್ಲ ವಿದ್ವಾಂಸರು ನವೀನವಾದ ವಸ್ತು ತಂತ್ರದ ಜೊತೆಗೆ ಕಾದಂಬರಿಯ ಭಾಷಾ ಬಳಕೆಯ ಬಗೆಗೆ ಹೆಚ್ಚು ಮಾತನಾಡಿದಂತಿದೆ ಭಾಷಾ ಬಳಕೆ ಎಲ್ಲೂ ಕೃತಕವಾಗಿ ಕಾಣದೇ ಸಂದರ್ಭೋಚಿತವಾಗಿ ಮೂಡಿ ಬಂದಿದೆ ಎಂಬುದನ್ನು ಮೇಲಿನ ಮಾತುಗಳು ತಿಳಿಸುತ್ತವೆ.

**ಕಾದಂಬರಿಯಲ್ಲಿನ ಪ್ರಾದೇಶಿಕ ಪದಗಳು :**

'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ ಬಳಸಿದ ಭಾಷೆ ಪ್ರಾದೇಶಿಕ ಭಾಷೆಯೂ ಹೌದು ಸಾಮಾಜಿಕವೂ ಹೌದು ಪ್ರಾದೇಶಿಕದೊಳಗೆ ಸಾಮಾಜಿಕವೂ ಇರುತ್ತದೆ. ಪ್ರಾದೇಶಿಕ ಪ್ರಭೇದದ ವ್ಯಾಪ್ತಿ ದೊಡ್ಡದು. ಸಾಮಾಜಿಕದ ವ್ಯಾಪ್ತಿ ಕಿರಿದು ಅಂದರೆ ಪ್ರಾದೇಶಿಕ ಭಾಷೆಯೇ ಇಡೀ ಕಾದಂಬರಿಯನ್ನೆಲ್ಲಾ ಆವರಿಸಿದೆ ಎನ್ನುವಾಗಿಲ್ಲ. ಶಿಷ್ಟಕನ್ನಡ ನಿರೂಪಣೆಯೊಂದಿಗೆ ಪಾತ್ರಗಳ ಸಂಭಾಷಣೆಯಲ್ಲಿ ಪ್ರಾದೇಶಿಕ ಭಾಷೆಯನ್ನು ತರಲಾಗಿದೆ. ವಿಶೇಷವಾಗಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಮತ್ತು ರಾಯಭಾಗ ಕಡೆಯ

ಭಾಷೆ ಇದಾಗಿದೆ. ಕಾದಂಬರಿಕಾರರು ದಲಿತ ವರ್ಗದವರಾದ್ದರಿಂದ, ಶಿಕ್ಷಿತರಾಗಿರುವುದರಿಂದ ಈ ಕಾದಂಬರಿಯ ಭಾಷಾ ಸ್ವರೂಪ ವಿಭಿನ್ನವಾಗಿದೆ.

ಈಗಾಗಲೇ ಹೇಳಿದಂತೆ ಕಾದಂಬರಿಯಲ್ಲಿ ಸಂಭಾಷಣಾ ಮಾದರಿ ಹಾಗೂ ನಿರೂಪಣಾ ಮಾದರಿ ಭಾಷಾ ಬಳಕೆ ಇದ್ದು, ಎರಡೂ ಮಾದರಿಗಳನ್ನೂ ಮೇಳವಿಸಿರುವುದನ್ನು ಈ ಕೆಳಗಿನಂತೆ ಕಾಣಬಹುದು.

೧. ಶಾಲೆಯಲ್ಲಿ ಮಾದೇವನ ಮಗಳಿಗೆ ಯಾವುದೋ ಕ್ಷತ್ರೀಯರ ಹುಡುಗಿ 'ಮಹಾರ' 'ಮಹಾರ' ಎಂದು ಚುಚ್ಚು ಮಾತಾಡಿದ್ದರಿಂದ ಮಗಳು ಅಂಬಾ ತಂದೆಗೆ ''ಆ ಹಲಕಟ್ ರಂಡಿ, ನೀ ಮಹಾರ್ ಪೈಕಿ ಅಂತ ಮಾತ ಮಾತಗಿ ಚುಚ್ಚತಾಳು ನಾನ್ಯಾಕ ಸುಮ್ಕಿರ್ಲಿ?'' (ಪು.೫) ಎಂದು ಕೇಳುವಳು. ಅದಕ್ಕೆ ಅಪ್ಪ ''ಆ ಪುಟ್ಟಿ ತಿಳ್ಕೊಂಡಾಂಗ ನಾವೇನ ಮಹಾರ ಪೈಕಿ ಅಲ್ಲ ಬಿಡು'' ಎನ್ನುವನು

೨. ಒಮ್ಮೆ ಸಹೋದ್ಯೋಗಿ ''ಯಾಕೋ ಕಾಂಬಳೇ ಒಬ್ನ ನಗಾಕತ್ತಿ'' ಎಂದಾಗ ''ಏ ಏನಿಲ್ಲ ಬಿಡು, ಸುಮ್ಮಕ ಹಂಗ ನಕ್ಕೆ'' (ಪು. ೮) ಎಂದನು.

೩. ಹೀರಾಬಾಯಿ ದೇವರಿಗೆ ''ಮಕ್ಕಳಿಲ್ಲದಕ್ಕಾಗಿ ಇದನ್ನ ನನ್ನ ಉಡ್ಯಾಗ ಹಾಕೀದಿ ತಿರುಗಿ ಕಸಕೋಬ್ಯಾಡ'' ಎಂದು ಮೊರೆಯಿಡುತ್ತಿದ್ದಳು (ಪು. ೧೯)-

೪. ಹೀರಾಬಾಯಿ ಮಾದೇವನಿಗೆ ಮದುವೆ ಮದುವೆ ಎಂದು ತವಕಪಡುತ್ತಿರುದನ್ನು ಕಂಡು ಗಂಡ ಜಾನೂಬಾ ''ಆಯ್ತು ತಡೀ ಮದುವಿ ಅಂದ್ರ ಗೊಂಬೀ ಆಟ ಏನ?'' (ಪು. ೨೬) ಎಂದು ಬೈಯ್ದನು.

೫. ಜಾನೂಬಾ ಸಂತಿಗೆ ಹೋಗಿ ಎಮ್ಮೆಯನ್ನು ತಂದಿರುದನ್ನು ಕಂಡ ಹೆಂಡತಿ ಹೀರಾಬಾಯಿ ''ಇದನ್ಯಾಕ ತಂದಿ ಪೀಡಾನ್ನ ಇದರ ಹೊಟ್ಟಿಗಿ ಯಾರ ಹಾಕಾವ್ರು'' (ಪು. ೪೧) ಎಂದು ತಕರಾರು ತೆಗೆದಳು.

೬. ಮಾದೇವ ಜಾತಿ ಭ್ರಮೆಯಲ್ಲಿ ಮುಳುಗಿದ್ದರಿಂದ ಹೆಂಡತಿ ಸುಮತಿಗೆ ''ನನ್ನ ಜಾತಿ ಮಂದಿ ಫೋಟೊ ನಾ ಹಚ್ಚಗೊಂಡ್ರ ನಿನಗ್ಯಾಕ ಉರದಂಗ ಆಗತೈತೆ ಭೋಸಡಿ'' (ಪು-೭೫) ಎಂದು ಅವಾಚ್ಯವಾಗಿ ಬೈಯ್ದ.

ಕಾದಂಬರಿಯ ನಾಯಕ ಮಾದೇವ 'ರಾಜವಂಶಸ್ಥ' ಎಂಬ ಗುಂಗಿನಿಂದ ಹೊರ ಬರದೇ ಅದೇ ಕನಸಿನಲ್ಲಿ ಹೆಂಡತಿ ಸುಮತಿಯನ್ನು ಹಿಗ್ಗಾಮುಗ್ಗಾ ಒದ್ದಿದ್ದ. ಅದನ್ನು ತಾಳಲಾರದೇ ಸುಮತಿ ಗಂಡನಿಗೆ ನೇರವಾಗಿ ''ಏ ಏನಾಗೇತ್ರಿ ನಿಮಗ ಹುಚ್ಚಗಿಚ್ಚ ಹಿಡಿದೈತೇನೆ?'' ಎಂದು ಸೊಂಟವನ್ನು ನೀವಿಕೊಳ್ಳುತ್ತಾ ಜಿಂವಾ ತುಗೊಳುದು ಎಂದು ಶಪಿಸಿದಳು. ಅದಕ್ಕೆ ಮಾದೇವ ''ಹಲ್ಕಟ್ ರಂಡೇ ನಾ ರಾಜಾ ಆದ್ರೆ

ನೀ ರಾಣಿ ಆಗಿರ್ತಿಯಂತ ಗೊತ್ತಿಲ್ಲ ನಿನಗೆ? ಹಂಗ ಏನ್ರೆ ಕಿಸದ ಮಾತಾಡ್ತಾಳು ತಿಳಿಲಾರ್ದ" ಎಂದು ಬೈಯ್ದನು.

ಹೀಗೆ ಕಾದಂಬರಿಯಲ್ಲಿ ಪಾತ್ರಗಳ ಮೂಲಕ ಪ್ರಾದೇಶಿಕ ಅಥವಾ ಸಾಮಾಜಿಕ ಪ್ರಭೇದವನ್ನು ನಿರೂಪಣೆಯಲ್ಲಿ ಶಿಷ್ಟ ಕನ್ನಡವನ್ನು ತರಲಾಗಿದೆ. ಕಾದಂಬರಿಯಲ್ಲಿ ಬಳಸಿದ ಪ್ರಾದೇಶಿಕ ಪದಗಳು ಹೀಗಿವೆ.

ಕಾದಂಬರಿಯಲ್ಲಿನ ಗ್ರಾಮ್ಯ/ಪ್ರಾದೇಶಿಕ ಪದಗಳು

೧. ಏನಾಗೇತಿ
೨. ಹಿಡಿದೈತೇ
೩. ಯಾರದರೇ
೪. ಜಿಂವಾ
೫. ತುಗೊಳುದು
೬. ಮಣ್ಣಾಗಡಗ್ಲಿ
೭. ಹೆಂಗೆಂಗರೆ
೮. ಮಾಡಾಕತ್ತೀರಿ
೯. ಅಲಗರ್ಜಿ
೧೦. ನಪಾಸ್
೧೧. ಯಾಂವರೆ
೧೨. ಹಂಗ
೧೩. ಅದಾವು
೧೪. ಬರಾಂವ
೧೫. ಸಂಜೀಕ
೧೬. ಕರಾದಾರು
೧೭. ಸಮಾಜದೊಳಗ
೧೮. ತರಾಕತ್ತೈತಿ
೧೯. ಕುಡದ ಬರೂಣು
೨೦. ಆಗವಾತು
೨೧. ಇಂವಾ

೨೨. ಅಂವಾ

೨೩. ಇದೇನಪಾ

೨೪. ಚುಲೋ

೨೫. ಕೇಳಸೂಲದಂಗ್

೨೬. ಕೂಡ್ರತನು

೨೭. ನೀಂವ

೨೮. ಬಾಳೆ

೨೯. ಸುದ್ದ

೩೦. ಉಡಗ್ತಾನು

೩೧. ಘಸಾಸತಾರು

೩೨. ತುಡಗ

೩೩. ಭಾಡ್ಯಾ

೩೪. ದೌಡ

೩೫. ವ್ಯೋಸೆ

೩೬. ಸಾಕರಪೋಡ

೩೭. ಪಾವನೇರ

೩೮. ಅಬರೂ

೩೯. ಧೇಡ

೪೦. ಯ್ಯಾನ

೪೧. ಬರ್ತೀವು

೪೨. ಕುಂಡ್ರು

೪೩. ಕುಡ್ಯೂಣು

೪೪. ಯಾನರೇ

೪೫. ಹಂಗಾದ್ರ

೪೬. ಯಾಡ್ನ

೪೭. ಗಬ್ಬ

೪೮. ಕಕ್ಷಾ

೪೯. ಮುರಕಾ

೫೦. ಪಿಶಿವಿ

೫೧. ದೌಳಕೀನ

೫೨. ಆಟವಾಡೆ

೫೩. ಜಿಪರಿ

೫೪. ಪಡ್ಲಗಿ

೫೫. ತೆವಲು

೫೬. ಸುಧಾರಿಸ್ಲಾಕ

೫೭. ಆಟೂಕ

೫೮. ಜಲ್ಮಾ

೫೯. ಸೂಳಿ

೬೦. ನಿನ್ನೂನ

೬೧. ಯಾರೂವ

೬೨. ಅಗಲಾಗ

೬೩. ಕರಗಾಲ

೬೪. ತಸ್ತೀ

೬೫. ಕಮಿತಕಮಿ

೬೬. ಗರಜ

೬೭. ಅವುಚಿಕೊಂಡು

೬೮. ಇಕ್ಡೆ

೬೯. ಕಾಯ್

೭೦. ಉಡುಗು

೭೧. ಅವತಿದೂರ

೭೨. ರಟ್ಟ್ಯಾ

೭೩. ಕಾರಬಾಡ

೭೪. ಮಾಡಾಕ

೭೫. ದುಡೀಕ

೭೬. ಅಗ್ಯಾರು

೭೭. ಅದೀನು

೭೮. ಸುಮ್ಮಕ

೭೯. ತರೂದ

೮೦. ಆದ

೮೧. ಕುಂಡ್ರು

೮೨. ಹಾಕ್ಯಾರು

೮೩. ಅನ್ನೊದ

೮೪. ತುಗೊಳ್ಳಿ

೮೫. ಅದೆಂಗ್

೮೬. ದೇಸ

೮೭. ಹ್ವಾದ್ರು

೮೮. ಕೂಸಗೋಳ್ನ

೮೯. ಏಕೋ

೯೦. ಝುಂಡಾ

೯೧. ಮುರದ

೯೨. ನಡಾ

೯೩. ಅಟ್ಟಿ

೯೪. ಅಡ್ನನಾಂವ

೯೫. ಅಡಾಣ್ಯಾ

೯೬. ಅಲಗರ್ಜಿ

೯೭. ಅರೇರಾಂವ

೯೮. ಎರ್ಘ್

೯೯. ಕಮಾಯಿ

೧೦೦. ಕಮ್ಮಗ

೧೦೧. ಕಣ್ಣ ಹಚ್ಚ್ಯಾವು

೧೦೨. ಕಾಯರ್ರೆ ಕಾಸರ್ರೆ

೧೦೩. ಕಾಸೇಡಿ

೧೦೪. ಕಾನಡಿ

೧೦೫. ಚೆಂತಾನಕಾ

೧೦೬. ಕಾಲಗೇರಿ

೧೦೭. ಕಡ್ಯಾಂವ

೧೦೮. ಲೌಡ್ಯಾ

೧೦೯. ಗಪ್ಪ

೧೧೦. ಗವ್ವ

೧೧೨. ಗೋಳೆ

೧೧೩. ಘುಳಿಗಿ

೧೧೪. ಘಟನಾ

೧೧೫. ಚಾಲೂ

೧೧೬. ಚೊಣ್ಣಾ

೧೧೭. ಚೌವೀಸ್

೧೧೮. ಛಿನಾಲ್ಕಾ

೧೧೯. ಜೋಗತಿ

೧೨೦. ಜುಲಮಿ

೧೨೧. ಝುರಕಿ

೧೨೨. ಡುಬ್ಬ

೧೨೩. ತಾತ್ಯಾ

೧೨೪. ತಾಬಾ

೧೨೫. ತುಡುಗು

೧೨೬. ತೆರವು

೧೨೭. ದಂಡವತ

೧೨೮. ದಂಧೆ

೧೨೯. ಧಾಡಸಿ

೧೩೦. ದಿಕ್ಕಾದೆಸಿ

೧೩೧. ದೌಳಕೀನ

೧೩೨. ನಂದೋಸು

೧೩೪. ನಿಲ್ಲವಾತೇನು

೧೩೩. ನೆಡ್ತಾನ

೧೩೪. ಪಡ್ನಗಿ

೧೩೫. ಪೋಜ್ದಾರ್

೧೩೬. ಪಂಚಕ

೧೩೭. ಪಸಂದ

೧೩೭. ಫಸಾಸು

೧೩೮. ಬಾಂದ

೧೩೯. ಬೇಕಾರ

೧೪೦. ಬಿಕ್ಕೇ

೧೪೧. ಮಹಾರ್

೧೪೨. ಮಾರಾಯ್ನ

೧೪೩. ಮಾಯೆ

೧೪೪. ಮೋತಿ

೧೪೫. ಮೋರ್ತಾ

೧೪೬. ಮಾಂವಶಿ

೧೪೭. ಮಾಯಿಸಾಹೇಬ

೧೪೮. ಯಾನ

೧೪೯. ಯಾನ ಕ್ಯಾನ್ರೇ

೧೫೦. ಲಲ್ಲ

೧೫೧. ಲಬಾಡ

೧೫೨. ವಾಳತಾ

೧೫೩. ವಖಾರ

೧೫೩. ಸಾಕರಪೋಡ

೧೫೪. ಶೀಲಾ

೧೫೫. ಶರ್ರಮ್

೧೫೬. ಸರಾಪಿಸು

೧೫೭. ಹುಟಾಜ್

೧೫೮. ಹಾರೂ

೧೫೯. ಹೊಡಮಳ್ಳಿ

೧೬೦. ಹೊರಗ

೧೬೧. ಹ್ಯಾಂಟ್ಯಾ

೧೬೨. ಶ್ಯಾಣವ್ವಕುಳಿ

**ಕಾದಂಬರಿಯಲ್ಲಿನ ಮರಾಠಿ ರೂಪಗಳು**

ಹೊಲಗೇರಿಯ ರಾಜಕುಮಾರ ಕಾದಂಬರಿಯಲ್ಲಿ ಪ್ರಾದೇಶಿಕ ಭಾಷೆಯ ಜೊತೆಗೆ ಅನ್ಯಭಾಷೆಯ ರೂಪಗಳು ಅಥವಾ ಪದಗಳು ಸಹ ಬಳಕೆಯಾಗಿವೆ. ಇವು ಕಾದಂಬರಿಗೆ ಸಹಜತೆಯನ್ನು ತಂದಿವೆ. ಬೆಳಗಾವಿ ಮಹಾರಾಷ್ಟ್ರ ಗಡಿಭಾಗದ ಜಿಲ್ಲೆಯಾದುದರಿಂದ ಅಲ್ಲಿನ ಭಾಷೆಯ ಮೇಲೆ ಮರಾಠಿಯ ಪ್ರಭಾವ ಸಾಕಷ್ಟಿದೆ. ಅಲ್ಲಿನ ಭಾಷೆಯಲ್ಲಿ ಮರಾಠಿಯ ಪದಗಳು ಹೇರಳವಾಗಿವೆ. ಮರಾಠಿಯ ವಾಕ್ಯಗಳೂ ಬಳಕೆಯಲ್ಲಿವೆ. ಇದನ್ನು ಕಾದಂಬರಿಯು ಹಿಡಿದಿಡುವಲ್ಲಿ ಯಶಸ್ವಿಯಾಗಿದೆ.

ಕಾದಂಬರಿಯನ್ನು ಗಮನಿಸಿದರೆ ನಾಯಕ ಮಾದೇವ ಶಾಲಾ-ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗ ಮರಾಠಿಯನ್ನು ಬಳಸುವುದು. ಮನೆ ಪರಿಸರದಲ್ಲಿ ಕನ್ನಡವನ್ನು ಬಳಸುವದು ಇದೆ. ಮಾದೇವ ಪೋಸ್ಟ್‌ಮಾಸ್ಟರ್ ಹುದ್ದೆ ಪಡೆದ ನಂತರವೂ ಅಲ್ಲಿ ಸ್ವಲ್ಪ ಮರಾಠಿ ಸಂಪರ್ಕ ಇತ್ತು. ಕಾದಂಬರಿಯ ಉದ್ದಕ್ಕೂ ಬಳಕೆಯಾಗಿರುವುದನ್ನು ಕಾಣಬಹುದು. ಕೆಲ ಮರಾಠಿ ವಾಕ್ಯಗಳು ಅಥವಾ ಪದಗಳು ಹೀಗಿವೆ.

**ಕಾದಂಬರಿಯಲ್ಲಿನ ಮರಾಠಿ ಪದಗಳು ಮತ್ತು ಅರ್ಥಗಳು**

| | |
|---|---|
| ೧. ಇಚ್ಯಾ ಆಯಿಲಾ | ಇವನಮ್ಮನ್ ಇವನವ್ವನ್ |
| ೨. ಮಲಾಪನ್ ಮಾಹಿತ ನಾಹಿವೋ | ನನಗೂ ಗೊತ್ತಿಲ್ಲಾರೀ |
| ೩. ಉದಯಾ ಬಗೂ | ನಾಳೆ ಬನ್ನಿ ನೋಡೋಣ |
| ೪. ಜರಾ ಪಾನಿದ್ಯಾ | ನೀರು ಕೊಡಿ ಸ್ವಲ್ಪ |
| ೫. ಅಮಿ ಮಹಾರ ಅಹೆವೋ | ನಾವೂ ಹೊಲೇರು ಇದ್ದೀವಿ |
| ೬. ತಿಕಡ ಸರಕ್ | ಆ ಕಡೆ ಸರಿಯೋ |
| ೭. ಧಾಡಸಿ | ದಷ್ಟ ಪುಷ್ಟ |
| ೮. ದೋನಸೆ | ಎರಡು ನೂರು |
| ೯. ಧಾಧಾದ್ದು ಪಂದ್ರಾ | ಹತ್ತರದ್ದು ಹದಿನೈದು |
| ೧೦. ಪಂಚವೀಸ | ಇಪ್ಪತ್ತೈದು |

| | |
|---|---|
| ೧೧. ತೀನ ಸೆದ್ವವೀಸ | ಮೂರು ನೂರ ಇಪ್ಪತ್ತು ರೂಪಾಯಿ |
| ೧೨. ಮಲಗಾ | ಹುಡುಗ |
| ೧೩. ಯೌವ್ನ | ಇಷ್ಟು |
| ೧೪. ಹೈ ಕಾಯ್ | ಇದ್ದಾನೆಯೇ |
| ೧೫. ಮಣೂನು | ಅಂತೆ |
| ೧೬. ಪೋದರೀಚ್ಯಾ | ಪೋದರಿಕೆ |
| ೧೭. ತೂ ಕಾಯ್ | ನೀನು ಯಾರು |
| ೧೮. ಕುಟ್ನೆ ಗಾವಾಚ್ | ಯಾವೂರವ |
| ೧೯. ಮೀ ಚಲತೋ | ನಾನು ಹೋಗತಿನಿಸರ್ |
| ೨೦. ಅಮಚ | ನಮ್ಮ |
| ೨೧. ಕಾಲೇಜಲಾಯೇ | ಕಾಲೇಜಗಿ ಬಾ |
| ೨೨. ಝೂಲಾಚ್ ಪಾಹೀಜೆ | ಶಿವಾಜಿಯ ಜೈಕಾರ ಘೋಷಣೆ |
| ೨೩. ಜ್ಯಾನ್ಯಾಚ್ ಪೋರಗಾ | ಜನೇನ ಮಗ |
| ೨೪. ತು ಮಹಾರ ಕಾಯ್ | ನೀನು ಮಹಾರ ಇದಿಯಲ್ಲ |
| ೨೫. ಮಣಜೆ | ಅಂದರೆ |
| ೨೬. ಕಾಯ್ ಝೂಲಾವೋ | ಏನಾಯಿತು ರೀ |
| ೨೭. ಕಾಯ್ ನ ಚಲ್ | ಏನಾಗಿಲ್ಲ (ಏನಿಲ್ಲ) |
| ೨೮. ಕೋನತೆ | ಯಾವನು ? |
| ೨೯. ಖುಳ್ಯಾ ಲೋಕಲಾಪಣ ಆತ ಘೇತಾ | ಹುಚ್ಚರನ್ನು ಒಳ ಬಿಡುತ್ತೀರಿ |
| ೩೦. ಉತರಾಕೀ ವೊ | ಇಳಿಯೋ |

## ಕಾದಂಬರಿಯಲ್ಲಿನ ಮರಾಠಿ ವಾಕ್ಯಗಳು

೧. 'ಮಲಾಪನ್ ಮಾಹಿತ ನಾಹಿವೋ ಉದ್ಯಾಯಾ ಬಗೂ' (ಪು-೧೦) (ನನಗೂ ಗೊತ್ತಿಲ್ಲಾರೀ ನಾಳೇ ಬನ್ನಿ ನೋಡೋಣ)

೨. ''ಅಮೀ ಮಹಾರ ಆಹೆಮೊ'' (ಪು. ೧೪) (ನಾವು ಹೊಲೇರು ಅದಿವ್ರಿ)

೩. ''ಅರೇ ತೂ ಎಸ್ಸೀ ಕಾಯ್? ಬಗಿತರ್ ಬ್ರಾಹ್ಮಣ ಸಾರಕೆ (ಪು. ೨೪) ದಿಸತೋ ಅಣಿ ಸೈಕಲ್‌ವರ್ ಕಾಲೇಜಲಾಯೇತೋ !'' (ಅರೇ ನೀ ಎಸ್ಸಿ ಏನು? ನೋಡಿದರ ಬ್ರಾಹ್ಮಣರೆಂವ ಕಂಡಾಗ ಕಾಣಿಸ್ತಿ ಸೈಕಲ್ ಮ್ಯಾಲ ಬ್ಯಾರೆ ಕಾಲೇಜಿಗಿ ಬರ್‍ತೀ)

೪. ''ಮಹಾರಾಚ್ ಮಲಗಾ ಯೌವ್ವ ಶಾಣಾ ಹೈ ಕಾಯ್'' (ಪು. ೨೬) (ಹೊಲೇರ ಹುಡುಗ ಇಷ್ಟು ಶ್ಯಾಣಾ ಅದಾನ)

೫. ''ಅರೇ ಹೇ ಕಾಂಬಳೆ ಮಣೂನ ರ್‍ಯಾಂಕ್ ಸ್ಟುಡೆಂಟ ಆಹೆ'' (ಪು. ೩೧) (ಕಾಂಬಳೆ ಅಂತ ರ್‍ಯಾಂಕ್ ವಿದ್ಯಾರ್ಥಿ ಅದಾನು.)

೬. ''ಕಾಡರೇ ಪೋದರೀಚ್ಯಾ, ದೋನ ರ್‍ಯೂಪ್ಯಾ ರ್‍ಯಾಂಕ್ ಮಿಳಾಲೆ ಆಹೇ'' (ಪು. ೩೧)

'ಅಮಾಲಾ ಪಾರ್ಟಿ ಗೀರ್ಟಿ ಕಾಯ್ ನಾಹಿ ಕಾಯ್' (ಪೋದರಿಕೆ, ತಗಿ ಎರಡು ರೂಪಾಯಿ ರ್‍ಯಾಂಕ ಸಿಕ್ಕೈತಿ ನಮಗ ಪಾರ್ಟಿ ಗೀರ್ಟಿ ಏನಿಲ್ಲೇನ)

೭. 'ಅರೇ ಕಾಂಬಳೆ ಮಣಜಿ ತೂ ಕಾಯ್ ಕುಟ್ಲೆ ಗಾವಾಚ್' (ಪು. ೩೧) (ಅರೇ ಕಾಂಬಳೇ ಅಂದರೆ ನೀನೇನಾ? ಯಾವೂರು?)

೮. 'ಮಿ ಚಲತೋ ಸಾರ್ ಪು. ೩೧ (ನಾನು ಹೋಗ್ತಿನಿ ಸರ್)

೯. 'ಹೇ ಮಹಾತ ನಾಹಿ ಕಾಯ್ ಮಹಾರ ಜ್ಯಾನೇಚ್ ಪೋರಗಾ' (ಪು. ೪೫) (ಇಂವ ಗೊತ್ತಿಲ್ಲೇನ ಹೊಲೇರ ಜಾನೇನ ಹುಡುಗಾ)

೧೦. 'ಆಮಚ್ಯಾ ಸಕ್ಯಾ ಇಂದ್ರಾ ಪೇಕ್ಷಾ ಶೂರ ಆಹೇ' (ಪು. ೪೯) (ನಮ್ಮ ಸಕ್ಕು, ಇಂದ್ರನಿಗಿಂತಲೂ ಶೂರ ಅದಾನು.)

೧೧. 'ಪಲ್ ನಾವ್ ಕಾಯ್' (ಪು. ೮೬) (ತಮ್ಮ ಹೆಸರೇನು)

೧೨. 'ಮಣ್ ಜೆ ತೂ ಮಹಾರ್ ಕಾಯ್' (ಪು. ೮೬) (ಅಂದ್ರೆ ನೀನುಹೊಲೇರಂವ)

೧೩. 'ಮೀ ಮರಾಠವೋ, ಉದ್ಯಾಬಗೂಯೇ' (ಪು. ೮೬) (ನಾನು ಮರಾಠ ರೀ, ನಾಳೆ ಬಾ ನೋಡೋಣ)

೧೪. 'ಕಾಯ್ ಜಾಲಾವ್ರೋ, ಕಾಹೀ ನ್ಯಾ ಚಲ್' (ಪು. ೮೭)(ಏನಾತ್ರೀ, ಏನಿಲ್ಲ ಹೋಗು)

೧೫. 'ತುಮಿ ಬೆಲಗಾಂವಚ್ ಕಾಯ್' (ಪು. ೮೯) (ನೀವ ಬೆಳಗಾವದರೇನ)

೧೬. 'ಕೋನ ತೆ ಪೋದರಿಚ್ಯಾ' (ಪು. ೯೨) (ಯಾವನು ಅಂವ ಪೋಧರಿ ಮಗಾ)

೧೭. 'ತುಮಾಲಾ ಅಕಲ್ ನಾಹಿ, ಖುಳ್ಯಾ ಲೋಕಾಲಾ ಪಣ ಆತ ಘೇತಾ' (ಪು. ೯೨) (ನಿಮಗ ಬುದ್ಧಿ ಇಲ್ಲ ಹುಚ್ಚರನ್ನೂ ಒಳಗಡೆ ತುಗೋಳ್ತೀರಿ)

೧೮. 'ಊಠರೇ ಬೋಸಡಿಚ್ಯಾ' (ಪು. ೯೩) (ಏಳ್ಳೇ ಬೋಸಡಿ ಮಗನ)

೧೯. ''ಏ ಅರ್ಜ್ಯಾ ಇಕ್ಡೆ ಯೇರೆ ಪೋದರಿಚ್ಯಾ!'' (ಪು. ೯೪) (ಏ ಅರ್ಜ್ಯಾ ಈ ಕಡೆ ಬಾರಲೆ ಪೋಧರಿ ಮಗನ)

೨೦. ''ಜರಾ ಥಾಂಬಾ ಪಾಂಚ ಮಿನಿಟ ಮಧೆ ಯೇತೋ'' (ಪು. ೯೫) (ಜರ ನಿಲ್ಲಿರಿ ಐದ ನಿಮಿಷದೊಳಗ ಬರತೇನು)

೨೧. ''ತೇಚ್ಯಾ ಆಯಿಲಾ ಕಾಂಗ್ರೆಸ್, ಜನತಾ ಆಣಿ, ಬಿ.ಜೆ.ಪಿ., ಚ್ ರ್‍ಯಾಲಿ ಅಹೇತರ ಬೋಸ್ಡಿಚಾನು ಎಕ್ಸ್ಪ್ರಬೋಗಿ ಲಾವತಾತ ಅಣಿ ದಲಿತಾಲಾ ನಾಹೀ ಮಣತಾತ ಅತ್ತಾ ಕಸಲಾವಲಾ!'' (ಪು. ೧೦೯) (ಇವರೌವ್ನ ಕಾಂಗ್ರೆಸ್, ಜನತಾ ಮತ್ತು ಬಿಜೆಪಿ. ರ್‍ಯಾಲಿ ಇದ್ರ ಬೋಸ್ಡಿ ಮಕ್ಕಳು ಎಕ್ಸ್ಪ್ರಬೋಗಿ ಹಚ್ಚತಾರು, ದಲಿತರಿಗಾದರ ಇಲ್ಲ ಅಂತಾರು ಈಗ ಹೆಂಗ ಹಚ್ಚಿದ್ರು.)

೨೨. ''ಹಾಂ ಆಲೆದಿಸ್ತೆ, ಪ್ರೊಫೆಸರ್ ಮಿ ಯೇತೋ'' (ಪು. ೧೧೩) (ಹೊ ಬಂತ ಕಾಣಸ್ತೈತಿ, ಪ್ರೊಫೆಸರ ನಾ ಬರ್ತೀನಿ.)

**ಕಾದಂಬರಿಯಲ್ಲಿ ಆಂಗ್ಲ ಪದಗಳು**

ಆರಂಭದಲ್ಲೇ ಹೇಳಿರುವಂತೆ ಕಾದಂಬರಿಕಾರರು ಸುಶಿಕ್ಷಿತರೂ, ಅಧ್ಯಾಪಕರೂ ಆಗಿರುವುದರಿಂದ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವುದರಿಂದ ಅವರ ಕಾದಂಬರಿಯಲ್ಲಿ ಆಂಗ್ಲ ಪದಗಳ ಬಳಕೆಯೂ ಹೇರಳವಾಗಿದೆ. ಇತ್ತೀಚಿನ ದಿನಗಳಲ್ಲಿ ಸಾಹಿತ್ಯದಲ್ಲಿನ ಬರಿ ಕಾದಂಬರಿ ರೂಪದಲ್ಲಿ ಮಾತ್ರವಲ್ಲ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿ ಇಂಗ್ಲೀಷ್ ಪದಗಳ ಬಳಕೆಯಿರುವುದನ್ನು ಕಾಣಬಹುದು. ಆಡುಮಾತಿನಲ್ಲಿಯೂ ಆಂಗ್ಲ ಭಾಷೆಯಿಲ್ಲದೇ ಮಾತೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಇಂದು ಇಂಗ್ಲಿಷ ಪದಗಳು ಕನ್ನಡಕ್ಕೆ ಬಂದು ಕನ್ನಡದವೇ ಎನ್ನುವಷ್ಟು ಆಳವಾಗಿ ಬೇರೂರಿವೆ.

ಕಾದಂಬರಿಕಾರರು ಕಾದಂಬರಿಯಲ್ಲಿ ಬಳಸಿದಂತಹ ಇಂಗ್ಲಿಷ್ ಪದಗಳು ಅನುಕ್ರಮವಾಗಿ ಈ ತೆರನಾಗಿ ಮೂಡಿ ಬಂದಿದ್ದು ಅವು ಹೀಗಿವೆ.

೧. ಫೈಟಿಂಗ್

೨. ಬಕೆಟ್

೩. ಆಫೀಸರ

೪. ಟೈಮ್

೫. ಸೈಕಲ್

೬. ಕಾರ್ನರ್

೭. ಪಂಕ್ಚರ್

೮. ಶಿಫ್ಟ್

೧೦. ಫೈಲ್

೧೧. ಪೋಸ್ಟ್

೧೨. ಟೆಲಿಗ್ರಾಫ್

೧೩. ಡಿವಿಜನಲ್

೧೪. ಮ್ಯಾನೇಜರ್

೧೫. ಡಿಪಾರ್ಟ್‌ಮೆಂಟ

೧೬. ಕಮೀನ ಸರ್

೧೭. ಗುಡಮೊರ್ನಿಂಗ್

೧೮. ಕಾಮನ್ ಸೆನ್ಸ್

೧೯. ಡಿಸ್‌ಮಿಸ್

೨೦. ಆಪರೇಟರ್

೨೧. ಜ್ಯೂನಿಯರ್

೨೨. ಪ್ರಮೋಷನ್

೨೩. ಬೇಸಿಕಲಿ

೨೪. ಅಸೋಸಿಯೇಷನ್

೨೫. ಮೀಟಿಂಗ್

೨೬. ಫೂಲ್

೨೭. ರಿಸರ್ವೇಶನ್

೨೮. ಸೀರಿಯಸ್

೨೯. ಎಜುಕೇಟ

೩೦. ಆರ್ಗನೈಜ್

೩೧. ಸಿರ್ಟಿಫಿಕೇಟ್

೩೨. ಪ್ರೊಫೇಸರ್

೩೩. ಸರ್‌ನೇಮ್

೩೪. ಮಿಸ್ಟರ್

೩೫. ರಿಯಲಿ

೩೬. ವಂಡರ್‌ಫುಲ್

೩೭. ಡುಯಿಂಗ್

೩೮. ಹಾರ್ಡ್ಲೀ

೩೯. ಕನೆಕ್ಷನ್

೪೦. ಬಿಟ್ವೀನ್

೪೧. ಥಿಂಗ್

೪೨. ಎಕ್ಸಪರ್ಟ್

೪೩. ಡಿಟೇಲ್ಸ್

೪೪. ಆಫಿಡವೇಟ್

೪೫. ಬಲೂನ್

೪೬. ಎಂಪ್ಲಾಯಮೆಂಟ್

೪೭. ಅಡ್ಮಿಶನ್

೪೮. ರಿಜಲ್ಟ್

೪೯. ಡೌನ್

೫೦. ಸ್ಟ್ರೆಂಗ್ಥ್

೫೧. ಚೇರಮನ್

೫೨. ಕಾಂಪಿಟೇಶನ್

೫೩. ರಿಫಾರ್ಮ

೫೪. ಟೆಂಪರರಿ

೫೫. ಬ್ಯಾಲೆನ್ಸ್

೫೬. ಸಪ್ಲಾಯರ್

೫೭. ಅಡ್ಮಿಟ್

೫೮. ಸ್ಕಾಲರ್ ಶಿಪ್

೫೯. ಆರ್ಡರ್

೬೦. ಚೆಕಪ್

೬೧. ಪಾಯಿಂಟ್

೬೨. ಟೆಲಿಫೋನ

೬೩. ಬಾಲ್ಕನಿ

೬೪. ಲೈನ್

೬೫. ಕ್ಲಿಯರ್

೬೬. ಡಿಸ್‌ಕಸ್

೬೭. ಪರ್ಸನಲ್

೬೮. ಫುಟ್‌ಪಾತ್

೬೯. ವಾಕಿಂಗ್

೭೦. ಲಾಡ್ಜಿಂಗ್

೭೧. ಬೆಡಶೀಟ್

೭೨. ಹೋಟೆಲ್

೭೩. ಟ್ರೆಂಡ್

೭೪. ಟಿಕೇಟ್

೭೫. ಫ್ಲಾಟ್‌ಫಾರಂ

೭೬. ಸ್ಟೇಷನ್

೭೮. ಯುನಿಟಿ

೭೯. ರೀಡರ್

೮೦. ಸ್ಪಿರಿಟ್

೮೧. ರೇಟ

೮೨. ಕಪ್

೮೩. ಡ್ರೈವರ್

೮೪. ಗಾರ್ಡ್

ಆಂಗ್ಲ ವಾಕ್ಯಗಳು

೧. ''ಮೈ ಕಮೀನ ಸರ್'' (ಪು. ೦೬)

೨. 'ಗುಡ ಮಾರ್ನಿಂಗ್ ಸರ್' (ಪು.-೦೬)

೩. 'ಸೀ ಮಿಸ್ಟರ್ ಕಾಂಬಳೆ' (ಪು.-೧೦)

೪. 'ಬಟ್ ಯು ನೊ ದೇರ ಇಜ ಹಾರ್ಡ್ಲೀ ಎನಿ ಕನೆಕ್ಷನ್ ಬಿಟ್ವೀನ್ ಜೆಫರಸನ್ ಆ್ಯಂಡ ಮರಾಠಸ್' (ಪು.-೧೦)

೫. 'ಯು ಡು ಒನ್ ಥಿಂಗ್' (ಪು.-೧೦)

೬ 'ಯು ಮೀಟ್ ಒನ್ ಮಿಸ್ಟರ್ ಪ್ರೊಫೆಸರ್ ಶೆಟ್ಟರ್ ಇನ್ ಕರ್ನಾಟಕಾ ಯುನಿವರ್ಸಿಟಿ ಹೂ ಈಜ ಎಕ್ಸಪರ್ಟ್ ಇನ್ ಮರಾಠ ಹಿಸ್ಟ್ರೀ' (ಪು.-೧೦)

೮. 'ಹಾಂ ಟೆಲ್ ಹಿಮ್ ದ್ಯಾಟ್ ಆಯ್ ಡುಯಿಂಗ್ ಪಿ.ಎಚ್.ಡಿ. ಆ್ಯಂಡ ಕನ್ವೇ ಮಾಯ್ ರಿಗಾರ್ಡ್ಸ್' (ಪು. ೧೦)

೯. 'ಇಫ್ ಯು ಟೆಲ್ ಮಯ್ ನೇಮ್ ಹಿ ವಿಲ್ ಹೆಲ್ಪ್' (ಪು. ೧೦)

ಹೀಗೆ ಕಾದಂಬರಿಯಲ್ಲಿ ಕೇವಲ ಪದಗಳಲ್ಲ ಇಂಗ್ಲೀಷ್ ವಾಕ್ಯಗಳನ್ನು ಸಹಿತವಾಗಿ ಡಾ. ಶಿವರುದ್ರ ಕೆ. ಕಲ್ಲೋಳಿಕರ್ ಅವರು ಬಳಸಿದ್ದಾರೆ. ಗ್ರಾಮ್ಯದ ಸೊಗಡಿನ ಜೊತೆ ಜೊತೆಗೆ ಪಾಶ್ಚಾತ್ಯ ಭಾಷೆಯನ್ನು ಬಳಸಿ ಕಾದಂಬರಿಗೆ ಮೌಲ್ಯ ತಂದಿದ್ದಾರೆ. ಇನ್ನು ಕೆಲವು ಅನ್ಯದೇಶಿಯ (ಭಾಷೆಯ) ಪದಗಳನ್ನು ಬಳಸಿದ್ದಾರೆ ಅವು ಹೀಗಿವೆ.

ಕಾದಂಬರಿಯಲ್ಲಿನ ಅನ್ಯ ಭಾಷೆಯ ಪದಗಳು

೧. ಇಜ್ಜತ್

೨. ಥಂಡಿ

೩. ಚೌವೀಸ್

೪. ಮಸಲತ್

೫. ನಾರಾಜ

೬. ಮಸ್ತ್

೭. ಪತ್ತಲಾ

೮. ಅಕಲ

೯. ಖಾಲಿ

೧೦. ಚಾಲೂ

೧೧. ಕಾರಬಾರ

೧೨. ನಶೀಬ

೧೩. ಖುಷ್

೧೪. ಹಾಲತ್

೧೫. ನಜರ್

೧೬. ಪೈಲಾ

೧೭. ಖಬರ್

೧೮. ಲಬಾಡ

೨೦. ಪರದೇಶಿ

೨೧. ಜಲ್ಮಾ

೨೨. ಮುಲಾಜ

೨೩. ಖುಬೇದಾರ

೨೪. ಚಾಳೀಸ್

೨೫. ಲಪಡಾ

೨೬. ಖೂನಿ

೨೭. ಧನ್‌ದೌಲತ್

೨೮. ಪಸಂದ

೨೯. ಅಜಮಾಸ್

೩೦. ಧಮಕಿ

೩೧. ಹಮಾಲ್

೩೨. ಹಲಕಟ್

ಕಾದಂಬರಿಯಲ್ಲಿನ ಅನ್ಯದೇಶೀಯ ಪದಗಳು

೧. ದವಾಖಾನೆ

೨. ಹುಜೂರ್

೩. ಕಛೇರಿ

೪. ಜಮೀನ್

೫. ಸಲಾಮು

೬. ಹುಕುಂ

೭. ಕಛೇರಿ

೮. ಅರ್ಜಿ

ಪಾರ್ಶಿ ಪದಗಳು

೧. ನೌಕರಿ

೨. ಜುಲ್ಮಾನೆ

ಇನ್ನು ಕೆಲವು ವ್ಯಾಕರಣಾಂಶಗಳನ್ನು ಅಂದರೆ ಜೋಡುನುಡಿ, ಅನುಕರಣಾವ್ಯಯ, ಉಪಮೆ ಮತ್ತು ಕೆಲ ಗಾದೆಗಳನ್ನು ಕಾದಂಬರಿಕಾರರು ಬಳಸಿದ್ದಾರೆ. ಅವು ಈ ಕೆಳಗಿನಂತಿವೆ.

ಜೋಡುನುಡಿಗಳು

ಹೊತ್ತು - ಗಿತ್ತು

ಹೇಳಿ - ಗೀಳಿ

ತಿರುಗಾ - ಮುರಗಾ

ಸೂಟ - ಬೂಟ

ಪಾರ್ಟಿ - ಗೀರ್ಟಿ

ಸತ್ತ - ಗಿತ್ತ

ಸಾಲಾ - ಸೋಲಾ

ದಿಕ್ಕಾ - ದೇಶಿ

ಕಳ್ಳ - ಕಕಲಾತಿ

ಪಾತ್ರೆ - ಪಗಡೆ

ಹಾಲು - ಜೇನು

ಧನ್ - ದೌಲತ್ತು

ಸನ್ಮಾನ - ಗಿನ್ಮಾನ

ಟುಸ್ - ಪುಸ್

ಕುಡ್ಲಿ - ಬಿಡ್ಲಿ

ಬೀಡಿ - ಗೀಡಿ

ತಲಿ - ಗಿಲಿ

ಹಸು - ಗೂಸು

ದೇವ್ರು - ದಿಂಡ್ರು

ಅನುಕರಣಾವ್ಯಯಗಳು

ಟಿಕ್ ಟಿಕ್

ಧೋ ಧೋ

ಪದೆ ಪದೆ

ಲೊಚ್ ಲೊಚ್

ಥರ ಥರ

ಥಳ ಥಳ

ಪಟ ಪಟ

ರಣ ರಣ

ರಪ ರಪ

ಕಸಿ ವಿಸಿ

ಬಕ ಬಕ

**ಕಾದಂಬರಿಯಲ್ಲಿ 'ಉಪಮೆ'ಗಳ ಬಳಕೆ**

೧. 'ಈಗಲೋ ಆಗಲೋ ಜೀವ ಬಿಡುತ್ತಿರುವ ರುಗ್ಣಾವಸ್ಥೆಯಲ್ಲಿರುವ ರೋಗಿಯ ಹೃದಯ ಬಡಿದಂತೆ' (ಪು. ೦೨)

೨. 'ಅವರವ್ವನಕ್ಕಿಂತ ಈ ಕೂಸಿಗೆ ನಿನ್ನ ರೂಡೀನ ಜಾಸ್ತಿ ಐತೆಂತ್ತ ಕಾಣಸ್ತೈತಿ' (ಪು.-೧೫)

೩. 'ಜಾನೂಬಾನಿಗೆ ನಾನಾಸಾಹೇಬ ಮಹಾತ್ಮನಂತೆ ಕಂಡ' (ಪು.-೧೬)

೪. 'ದೇವಕಿಯಿಂದ ಯಶೋಧರೆಯ ಮಡಿಲು ಸೇರಿದ್ದ ಕೃಷ್ಣನಂತೆ ಈ ಮಗು ತನಗೆ'(ಪು-೧೯)

೫. 'ಹೆಂಗ್ ಕಡ್ಡೀಲೆ ಬರದಂಗ ಚೆಲುವ ಆದಾಳು' (ಪು.-೨೨)

೬. 'ನನಗ ಮುಳ್ಳ ಮುರದರ ತನಗ ಮುರದಂಗ ಅತ್ತಾಳು' (ಪು.-೪೩)

೭. 'ಉಡದಂತೆ ಅವನ ಹಿಡಿತ ಬಿಗಿಯಾಗತೊಡಗಿತು' (ಪು.-೭೩)

೮. 'ಅ ಹೊಲ್ಯಾರಂಗ ಮಾಡಬೇಡ' (ಪು.-೭೪)

೯. 'ಥೇಟ ಹೇಮಮಾಲಿನಿ ಬಂದ ಮುಂದ ನಿಂತಂಗ ಆಗ್ತತಿ ನೋಡ್ರಿ' (ಪು.-೮೨)

೯. 'ಈಗ ಮಾದೇವ ಬೇಟೆಗೆ ಎದ್ದ ಹುಲಿಯಂತೆ ಒಂದೊಂದೇ ಹೆಜ್ಜೆ ಇಡುತ್ತಾ...' (ಪು.-೯೧)

೧೦. 'ಗಾಣಕ್ಕೆ ಕಟ್ಟಿದ ಎತ್ತಿನಂತೆ' (ಪು.-೯೪)

೧೧. 'ಮರಳು ಗಾಡಿನಲ್ಲಿ ದಿಕ್ಕೆಟ್ಟ ಕುದುರೆಯಂತೆ' (ಪು.-೯೬)

೧೨. 'ಸೌಭಾಗ್ಯವತಿಯಂತೆ ನನ್ನ ಬಾಳ ಸಂಗಾತಿ' (ಪು.-೧೧೮)

೧೩. 'ಸುಮತಿಯ ಮುಖ ಗ್ರಹಣಗ್ರಸ್ತ ಚಂದ್ರನಂತಾಯಿತು' (ಪು.-೨೮)

**ಕಾದಂಬರಿಯಲ್ಲಿ 'ಗಾದೆ' ಬಳಕೆ**

೧. 'ಹಾದಿಕಣ್ಣ ಬೀದಿ ಕಣ್ಣ ನೋಡಿದಾವ್ರ ಕಣ್ಣಾಗ ಮೂರ ಹಾದಿ ಮಣ್ಣ' (ಪು.-೨೮)

೨. 'ಉಂಡ ಅಗಲಾಗ ಉಚ್ಚಿ ಹೊಯ್ಯಬ್ಯಾಡಾ' (ಪು.-೭೨)

ಕಾದಂಬರಿಯಲ್ಲಿ ಕಾದಂಬರಿಕಾರರು ನೈಜವಾದ ಪ್ರಾದೇಶಿಕ 'ಬೈಗುಳ'ಗಳನ್ನು ಹಿಡಿದಿಟ್ಟಿದ್ದಾರೆ ಅವುಗಳನ್ನು ಈ ಕೆಳಕಂಡಂತೆ ಗಮನಿಸಬಹುದು.

## ಕಾದಂಬರಿಯಲ್ಲಿ ಕಂಡುಬರುವ ಬೈಗುಳಗಳು

### ೧. ಸಾಮಾನ್ಯ ಬೈಗುಳಗಳು

೧.೧. ಹಲ್ಕಟರಂಡೆ

೧.೨. ನೀಚ ಭಾಡ್ಯಾ

೧.೩. ಬೋಸ್ಡಿ ಮಕ್ಕಳೇ

೧.೪. ಮಾದ್ಯಾ ಭ್ಯಾಡ್ಯಾ

೧.೫. ಸೂಳೇ ಮಕ್ಕಳೇ

೧.೬. ಛಿನಾಲ್ಯಾಮಗಾ

### ೨. ಶಾಪರೂಪದ ಬೈಗುಳಗಳು

೨.೧. ಇದರ ಮಾರಿ ಮಣ್ಣಾಗಡಗ್ಲಿ

೨.೨. ಎಲ್ಲೇರೆ ಹಾಳಾಗಿ ಹೋಗು

## ಕಾದಂಬರಿಯಲ್ಲಿ ವ್ಯಕ್ತಿನಾಮಗಳು

ಕಾದಂಬರಿಯಲ್ಲಿ ಬಂದಿರುವ ವ್ಯಕ್ತಿನಾಮಗಳು ಹೆಸರಿನಿಂದಲೇ ಅವರ ವೃತ್ತಿಯನ್ನು ಸೂಸುತ್ತವೆ. ಕಾದಂಬರಿಕಾರರು ಸಮುದಾಯದ ನೈಜವಾದ ಹೆಸರುಗಳನ್ನು ತೆಗೆದುಕೊಂಡಿದ್ದಾರೆ. ಕಾದಂಬರಿಯಲ್ಲಿ ಬಂದಿರುವ ಪ್ರತಿ ಹೆಸರು ನಿಜ ಜೀವನದಲ್ಲಿ ಅಂದರೆ ಪ್ರಸ್ತುತದಲ್ಲಿಯೇ ಇದೆ. ಅವ್ರು ಉಪಯೋಗಿಸಿದ ಹೆಸರುಗಳು ತರ್ಕಕ್ಕೆ ನಿಲುಕದ್ದು ಎಂಬ ಯೋಚನೆಯೇ ಇಲ್ಲ. ಅತ್ಯಂತ ಸರಳವಾದ ಸಮಾಜದ ನೈಜ ಬದುಕನ್ನು ಕಟ್ಟಿಕೊಡುವ ಪ್ರಯತ್ನ ವ್ಯಕ್ತಿಗಳಿಂದ ಮಾಡಿದ್ದಾರೆ.

ಕಾದಂಬರಿಯಲ್ಲಿ ಸುಮಾರು ೧೦೦ ರಿಂದ ೧೫೦ ರ ವರೆಗೆ ವ್ಯಕ್ತಿನಾಮಗಳು ಬರುತ್ತವೆ ಅವುಗಳಲ್ಲಿ ಕೆಲವು ಪೂರಕವಾಗಿ ಬಂದಿವೆ. ಕೆಲವು ಆಧಾರವಾಗಿ ಬಂದಿವೆ. ಇನ್ನು ಕೆಲವು ಸಾಂದರ್ಭಿಕವಾಗಿ ಬಂದಿವೆ. ಉಳಿದ ಎಲ್ಲಾ ಅಂಕಿತನಾಮಗಳು ಕಾದಂಬರಿಯ ಪ್ರಮುಖ ಬಿಂದುಗಳಾಗಿವೆ.

ಲೇಖಕರು ಬಳಸಿದ ವ್ಯಕ್ತಿನಾಮಗಳು, ಒಂದು ಸಮುದಾಯ, ಒಂದು ಅರಸ ಮನೆತನ, ಒಂದು ಸಾಮಾನ್ಯವರ್ಗ ಮತ್ತು ಮಧ್ಯಮವರ್ಗ ಎಂದು ಹೇಳುವಂತೆ ಇವೆ. ಅವುಗಳಲ್ಲಿ ಪ್ರಮುಖವಾಗಿ ಈ

ವ್ಯಕ್ತಿನಾಮಗಳು ಆಗಿವೆ. ಅಲ್ಲದೆ ಪುರಾಣದ ಕೆಲವು ವ್ಯಕ್ತಿನಾಮಗಳೂ ಪ್ರಾಸಂಗಿಕವಾಗಿ ಬಂದಿವೆ.

**ವ್ಯಕ್ತಿನಾಮಗಳು**

ಅಚ್ಯುತರಾವ್ ಗಾಯಕವಾಡ

ಮಾಧವರಾವ್ ಗಾಯಕವಾಡ

ನಾನಾ ಸಾಹೇಬ ಕರಾಡಕರ್

ಮಾದೇವ ಕಾಂಬಳೆ

ಅಂಬಾ ಭವಾನಿ

ಸುಮತಿ

ಕೇಸರ್ಕರ್

ವಾಘಮೋರೆ

ಪಾಟೀಲ್

ಕೋಲ್ಕಾರ್

ನೇಮಾಡೆ

ಥಾಮಸ್ ಜೆಫರ್ಸನ್

ಅಂಬಾಬಾಯಿ ಮಾದೇವ ಕಾಂಬಳೆ

ಅಂಬಾಬಾಯಿ ಮಾಧವರಾವ ಗಾಯಕವಾಡ

ಕುರುಂದವಾಡಕರ್

ಚಂದ್ರವ್ವ

ಮರೆಪ್ಪ

ತುಳಸಿ

ಖಂಡೋಬಾ

ಮಾದೇವ

ಜಾನೂಬಾ

ಹೀರಾಬಾಯಿ

ನಾನಾ ಸಾಹೇಬ ಕರಾಡಕರ

ಸಂಭಾಜಿರಾವ

ಯಶೋಧರೆ

ಮಾದೇವ ಜಾನೂಬಾ ಕಾಂಬಳೆ

ದುರ್ಗವ್ವ

ದಗಡು

ಅನುಷಾ ದೇಶಪಾಂಡೆ

ಸಾಂಗ್ಲಿಕರ್

ಪೋಜದಾರ

ಕರೆಪ್ಪ

ರಂಗವ್ವ

ಗಾಡಿಗೀಳ

ದೇಶಪಾಂಡೆ

ಅಡೂರ

ಗಾಯ್ತೊಂಡೆ

ಮಿರಜಕರ್

ಲಿಂಗರಾಜ್

ರಾಘು

ವಾಂಖೇಡೆ

ಶ್ರೀ ಸಾಯನಾಕ

ಗೋಲ್ಪೆ

ರಾವಶ್ಯಾ

ಪರಿಶ್ಯಾ

ಗೋಖಲೆ

ತಿಲಕ

ಹಣಮಂತ

ಗುಡ್ಡದ ಎಲ್ಲಮ್ಮ

ಫಕೀರವ್ವ

ದಾನಮ್ಮ

ಸಕಾರಾಮ

ದೇವರಾಯ ಇಂಗಳೆ

ಸಾಯಿಬಾಬಾ

ಯಾಳಗಿ

ಪರಶುರಾಮ

ಲಗಮವ್ವ

ಜಾನೂ (ಮಗ)

ಅರ್ಜುನರಾವ ಕರಾಡಕರ

ಕಾಕಾಸಾಹೇಬ

ಅಹಲ್ಯಾಬಾಯಿ

ರಾಮವ್ವ

ಕಾಶವ್ವ

ಪ್ರೊ ಶಿಂಧೆ

ಪ್ರೊ ಕದಂ

ಅಶೋಕ ಐನವರ್

ವಾಯ್.ಪಿ. ಕಾಂಬಳೆ

ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ

ಇಲ್ಲಿನ ವ್ಯಕ್ತಿನಾಮಗಳು ಪ್ರಾದೇಶಿಕ ಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಮರಾಠಿ ಪ್ರಭಾವವಿರುವ ಅಡ್ಡ ಹೆಸರುಗಳನ್ನು ಗಾಯಕವಾಡ್, ಕರಾಡಕರ್, ವಾಘ್‌ಮೋರೆ ಹೊಂದಿರುವಂತೆಯೇ ಸಾಮಾಜಿಕ ಸ್ವರೂಪವನ್ನು ವ್ಯಕ್ತಪಡಿಸುವ ಹೆಸರುಗಳಿವೆ. (ಮಾದೇವ, ಕಾಂಬಳೆ, ಕೋಲ್ಕಾರ್, ರಾವಶ್ಯಾ,ಪರಿಶ್ಯಾ,

ದಗಡು) ಮರಾಠಿ ಹೆಸರುಗಳಲ್ಲಿ ದುರ್ಗವ್ವ, ಜಾನೂಬಾ, ಹೀರಾಬಾಯಿ, ರಂಗವ್ವ ಸಾವಿತ್ರಿ ದಾನಮ್ಮ ಎಲ್ಲಮ್ಮ ಮುಂತಾದ ಪ್ರಾದೇಶಿಕ ಹಾಗೂ ಸಾಮಾಜಿಕ ಸ್ವರೂಪದ ಹೆಸರುಗಳಿವೆ. ಅಲ್ಲಲ್ಲಿ ಪುರಾಣದಲ್ಲಿ ಕಾಣಿಸಿಕೊಳ್ಳುವ ಹೆಸರುಗಳಿವೆ.

**ಕಾದಂಬರಿಯಲ್ಲಿ ಸ್ಥಳನಾಮಗಳು**

ಭಾಷಾದೃಷ್ಟಿಕೋನದಿಂದ ಸ್ಥಳನಾಮಗಳ ಹೆಸರಿಸುವಿಕೆ ಪ್ರಮುಖವಾಗಿದೆ. ಈಗಾಗಲೇ ಸ್ಥಳನಾಮಗಳ ಬಗ್ಗೆ ಅಧ್ಯಯನಗಳು ಆಗಿವೆ. ಆದರೆ ಈ ಕಾದಂಬರಿಯಲ್ಲಿನ ಸ್ಥಳನಾಮಗಳ ಅಧ್ಯಯನ ಅಲ್ಲ ಅವುಗಳ ಗುರ್ತಿಸುವಿಕೆ (ಹೆಸರಿಸುವಿಕೆ) ಮಾತ್ರ ಆಗಿದೆ. ಈ ಸ್ಥಳನಾಮಗಳು ಸ್ವಲ್ಪ ಪ್ರಮಾಣದಲ್ಲಿ ಇದ್ದರೂ ಕಾದಂಬರಿಗೆ ಯಾವುದೇ ರೀತಿಯಲ್ಲಿ ನ್ಯೂನತೆ ಆಗಿಲ್ಲ. ಈ ಕಾದಂಬರಿಯಲ್ಲಿ ಬಳಕೆಯಾದ ಕೆಲ ಸ್ಥಳನಾಮಗಳು ಹೀಗಿವೆ.

ಕಾದಂಬರಿಯ ಓಟಕ್ಕೆ ಪೂರಕವಾಗಿ ಪರಿಸರದ ಮಾಹಿತಿಯನ್ನು ನೀಡುತ್ತವೆ. ಸಾಮಾನ್ಯವಾಗಿ ಮರಾಠಿ ಪ್ರಭಾವವನ್ನು ಇಲ್ಲಿನ ಸ್ಥಳನಾಮಗಳು ಸೂಚಿಸುತ್ತವೆ. ಕಾದಂಬರಿಯಲ್ಲಿ ಬಳಕೆಯಾದ ಕೆಲ ಸ್ಥಳನಾಮಗಳು ಹೀಗಿವೆ.

**ಸ್ಥಳನಾಮಗಳು**

ಕುರುಂಡವಾಡ

ಜಮುಖಂಡಿ

ಮುಧೋಳ

ಸಾಂಗ್ಲಿ

ಕೃಷ್ಣನದಿ ತೀರ

ಕೋಲ್ಹಾಪುರ

ಶಿರೋಳ

ಬೆಳಗಾವಿ

ಮೀರಜ

ರಾಜವಾಡೆ

ಚವಾಟಗಲ್ಲಿ

ಕೋರೆಗಾಂವ

ಸಾಂಬ್ರಾ

ವಡಗಾಂವ

ಮಹಾರವಾಡ

ಬೆಂಡಿಗೇರಿ

ಚಿಕ್ಕೋಡಿ

ರಾಯಭಾಗ

ಶಹಾಪೂರ

ಶಿವಾಜಿ ಗಾರ್ಡನ್

ಖಾಸಭಾಗ

ಮೋಡಕಾ ಬಜಾರ

ರವಿವಾರ ಪೇಠ

ಸಮಾದೇವಿಗಲ್ಲಿ

# ಅಧ್ಯಾಯ ೫

# ಉಪಸಂಹಾರ

ಕಾದಂಬರಿಗಳ ಭಾಷಾವಿವೇಚನೆ ಹಿಂದಿನಿಂದಲೂ ಸಾಗುತ್ತಾ ಬಂದಿದೆ. ಅನೇಕ ಕಾದಂಬರಿಕಾರರು 'ಗ್ರಾಮೀಣ' ಸೊಗಡನ್ನು ತಮ್ಮ ಕಾದಂಬರಿಗಳಲ್ಲಿ ಹಿಡಿದಿಟ್ಟಿದ್ದಾರೆ. ಭಾಷೆಯ ಬಳಕೆಯಲ್ಲಿ ಪ್ರಾದೇಶಿಕ ಕನ್ನಡ ಮತ್ತು 'ಪ್ರಮಾಣ ಕನ್ನಡ' ಎಂಬ ಭಿನ್ನತೆಯನ್ನು ತಂದಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ 'ಹೊಲಗೇರಿಯ ರಾಜಕುಮಾರ' ಕಾದಂಬರಿಯ 'ಭಾಷೆ'ಯನ್ನು ಮತ್ತು 'ಬಳಕೆ'ಯನ್ನು ಕುರಿತಂತೆ ಅಧ್ಯಯನ ಮಾಡಲಾಗಿದೆ. ಈ ಕಾದಂಬರಿಯ ಅಧ್ಯಯನದಲ್ಲಿ ಸನ್ನಿವೇಶಗಳ ನಿರ್ಮಾಣ, ಭಾಷಾ ಕೌಶಲ್ಯ 'ಸಮುದಾಯ' ಮತ್ತು ಭಾಷೆಯ ನಡುವಿನ 'ಬಂಧ'ವನ್ನು ತಿಳಿಸಲಾಗಿದೆ. ಕಾದಂಬರಿಕಾರರು ಅವರು 'ಹೊಲಗೇರಿಯ ರಾಜಕುಮಾರ' ಕಾದಂಬರಿಯಲ್ಲಿ 'ಭಾಷಾ' ವೈಶಿಷ್ಟ್ಯವನ್ನು ತಂದಿದ್ದಾರೆ. ಭಾಷೆಯನ್ನೇ ಮೂಲ ಅಸ್ತ್ರವಾಗಿಟ್ಟುಕೊಂಡು ಕಾದಂಬರಿಯನ್ನು ರಚನೆ ಮಾಡಿದ್ದಾರೆ. ಅದರಲ್ಲಿ ಧರ್ಮ, ನಂಬಿಕೆ, ಸಂಪ್ರದಾಯ, ಸಂಸ್ಕೃತಿ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಭಾಷಾ ಬಳಕೆಯಿಂದ ಹೊರ ಹಾಕುವಲ್ಲಿ ಯಶಸ್ವಿಯಾಗಿದ್ದಾರೆ.

ಕಾದಂಬರಿಯು ಸಾಮಾಜಿಕ ಸ್ಥಾನಮಾನಗಳು, ನೋವು ನಲಿವುಗಳು ಮನುಷ್ಯನ ಬದಲಾವಣೆಯ ಅನಿವಾರ್ಯ ಪ್ರಸಂಗ ಅಥವಾ ವಸ್ತುಸ್ಥಿತಿ ಮುಂತಾದ ವಿಚಾರಗಳನ್ನು 'ಭಾಷಾ ಬಳಕೆ'ಯಲ್ಲಿ ವ್ಯಕ್ತಪಡಿಸಿರುವುದು ಕಂಡುಬಂದಿದೆ. 'ಕಾದಂಬರಿಯ' ವೈಶಿಷ್ಟ್ಯವನ್ನು ಕಂಡುಕೊಳ್ಳಲಾಗಿದೆ. ಸಾಮಾಜಿಕ ಸಾಂಸ್ಕೃತಿಕ ಮತ್ತು ಶೈಕ್ಷಣಿಕವಾಗಿಯೂ ಕೆಲ ವಿಚಾರಗಳನ್ನು ಕಂಡು ವ್ಯಕ್ತಪಡಿಸಲಾಗಿದೆ. ಕಾದಂಬರಿಯು ಎಲ್ಲಾ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದ್ದು ಅದರ ಭಾಷಾ ಬಳಕೆ ನಿರೂಪಣೆ ವಿಶೇಷವಾಗಿದ್ದು

ಅದನ್ನು ವಿವರಣಾತ್ಮಕ ಅಥವಾ ವಿಶ್ಲೇಷಣಾತ್ಮಕ ಮಾದರಿಯಲ್ಲಿ ಅಧ್ಯಯನ ಮಾಡಲಾಗಿದೆ. ಕಾದಂಬರಿಕಾರರು ಬಳಸಿರುವ ಭಾಷೆಯ ಸ್ವರೂಪವನ್ನು ಹಿಡಿದಿಡುವ ಕಾರ್ಯ ಮಾಡಲಾಗಿದೆ.

ಕಾದಂಬರಿಯಲ್ಲಿ ಬರುವ ನಾಯಕ ಪಾತ್ರದ ಮಾದೇವ ನಾಯಕಿ ಸುಮತಿ ಜಾನೂಬಾ ಹೀರಾಬಾಯಿ ಖಂಡೋಬಾ ನಾನಾಸಾಹೇಬ ಮತ್ತು ಲೇಖಕರ ನಿರೂಪಣೆ ಪಾತ್ರಗಳು ಇವೆಲ್ಲ ತುಂಬಾ ಅದ್ಭುತವಾಗಿ ಮೂಡಿಬಂದಿವೆ. ಹೀರಾಬಾಯಿ ಜಾನೂಬ ತಮ್ಮ ನಿರ್ಗತಿಕ ಸ್ಥಿತಿಯಲ್ಲಿಯೇ 'ನಾನಾಸಾಹೇಬ' ಎಂಬ ರಾಜನ ಆಸ್ಥಾನದ ಆಪ್ತಸಹಾಯಕ ಕೊಟ್ಟಿರುವ ಹಸುಗೂಸನ್ನು ಸ್ವಂತ ಮಗುವಿನಂತೆ ಸಾಕಿ ಸಲುಹಿದರು ಅಷ್ಟೇ ಅಲ್ಲ ಶಿಕ್ಷಣವನ್ನು ಕೊಡಿಸಿದರು. ಅವರ ಪ್ರೀತಿ ಮಮತೆ ಅಳೆಯದಷ್ಟು ಇದೆ. ನಾನಾಸಾಹೇಬ ಸಹಿತ ತನ್ನ ಪ್ರಾಣವನ್ನು ಮುಡುಪಾಗಿಟ್ಟು ಮಾದೇವನ ಪ್ರಾಣ ಉಳಿಸಿದನು. ಅವನು ತನ್ನ ಆಳರಸನ ಕರ್ತವ್ಯಕ್ಕೆ ಬದ್ಧನಾಗಿರುವುದನ್ನು ಗಮನಿಸಬಹುದು. ಹೊಲಗೇರಿಯ ಬಂಧು ಬಳಗ, ಕಾಲೇಜಿನ ಸಹಪಾಠಿಗಳು, ಆಫೀಸಿನ ಸಹೋದ್ಯೋಗಿವರ್ಗ ಮತ್ತು ಕೆಲವು ಸಹಾಯಕ ಪಾತ್ರಗಳು ಸಹಿತ ವಿಶೇಷತೆಯನ್ನು ಹೊಂದಿವೆ. ಎಲ್ಲಾ ಪಾತ್ರಗಳಲ್ಲಿ ಗ್ರಾಮ್ಯ ಅಥವಾ ಪ್ರಾದೇಶಿಕ ಭಾಷೆಯನ್ನೇ ಹಿಡಿದಿಡಲಾಗಿದೆ.

'ಹೊಲಗೇರಿಯ ರಾಜಕುಮಾರ'ನ ಕಥಾ ವಿನ್ಯಾಸವನ್ನು ಕಾದಂಬರಿಯ ಉದ್ದಕ್ಕೂ ನೋಡುವುದಾದರೆ, ಕಥಾನಾಯಕ ಮಾದೇವ ಚಿಕ್ಕಂದಿನಿಂದಲೇ ಹೊಲಗೇರಿಯಲ್ಲಿ ಬೆಳೆದು ದೊಡ್ಡವನಾಗಿ ವಿದ್ಯೆಪಡೆದು ಸಾಮಾಜಿಕ ಸಮಾನತೆಗಾಗಿ ದಲಿತರ ಪರವಾಗಿ ಹೋರಾಟದ ಹಾದಿಯಲ್ಲಿ ಇಳಿಯಬೇಕಾದರೆ ಆಕಸ್ಮಿಕವಾಗಿ ತುಳಸಿ ಮತ್ತು ವಿಮಲಿ ಅವರಿಂದ ಜನ್ಮವೃತ್ತಾಂತ ಗೊತ್ತಾಗಿ ಮಾದೇವ ಹೆಂಡತಿ ಮಕ್ಕಳನ್ನು, ಹೊಲಗೇರಿಯನ್ನು ಮತ್ತು ಹಿಂದೆ ಹೀನವಾಗಿ ಕಂಡ ಎಲ್ಲರನ್ನೂ ಹೀನವಾಗಿ ಕಾಣಲಾರಂಬಿಸಿದ್ದದ್ದು ಸಹಜವೇ ಆಗಿದೆ. ಮುಂದೆ ಮಾದೇವ ಸರಿತಪ್ಪು, ನ್ಯಾಯ ಧರ್ಮ, ಶಾಶ್ವತ ನಶ್ವರ ಮುಂತಾದ ವಿಚಾರಗಳಿಂದ ಮನಸ್ಸು ಪರಿವರ್ತನೆಯಾಗಿ ಅದೇ ಹೊಲಗೇರಿಗೆ ಬಂದು ಹೋರಾಟದಲ್ಲಿ ಭಾಗಿಯಾಗುವನು. ಹೀಗೆ ಕಾದಂಬರಿಯ ಆದಿಯಿಂದ ಹಿಡಿದು ಅಂತ್ಯದವರೆಗೆ ಭಾಷಾ ಪ್ರೌಢಿಮೆಯಿಂದ ಬೆಳೆದು ಬಂದಿದೆ. ಎನ್ನುವುದನ್ನು ತಿಳಿಯಲಾಗಿದೆ.

ಭಾಷೆ ಮತ್ತು ಶೈಲಿಯನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಕಾದಂಬರಿಯ ಕುರಿತಂತೆ ಹೇಳುವದಾದರೆ ಭಾಷೆಯನ್ನು ಹೇಗೆ? ಎಷ್ಟು? ಬಳಸಬೇಕು ಎನ್ನುವುದೇ 'ಶೈಲಿ'ಯಾಗಿ ಒಡಮೂಡಿ ಬಂದಿದೆ. ಭಾಷೆ ಮತ್ತು ಶೈಲಿಗೆ ಸಂಬಂಧಿಸಿದಂತೆ ವಿಭಿನ್ನವಾಗಿ ಅಧ್ಯಯನ ಮಾಡಲಾಗಿದೆ. ಪ್ರಾದೇಶಿಕ

ಆಡುಭಾಷೆಯೊಂದಿಗೆ ಪ್ರಸ್ತುತ ಆಧುನೀಕರಣದ ಇಂಗ್ಲಿಷ್ ಜೊತೆಗೆ ಅಲ್ಪಸ್ವಲ್ಪ ಸಂಸ್ಕೃತ, ಉರ್ದು ಭಾಷೆಗಳನ್ನು ಬಳಸಿರುವುದನ್ನು ಗುರ್ತಿಸಲಾಗಿದೆ. ಬೆಳಗಾವಿ ಪ್ರದೇಶವು ಮಹಾರಾಷ್ಟ್ರದ ಗಡಿಭಾಗದಲ್ಲಿ ಇರುವುದರಿಂದ 'ಮರಾಠಿ' ಭಾಷೆಯು ಕಾದಂಬರಿಯಲ್ಲಿ ವಿಶೇಷವಾಗಿ ಬಳಕೆಯಾಗಿದೆ. ಹಿಂದಿನಿಂದಲೂ ಮಹಾರಾಷ್ಟ್ರ ಮತ್ತು ಕರ್ನಾಟಕ ಗಡಿಗಳು ದ್ವಿಭಾಷಿಕ ಪ್ರದೇಶ. ಹಾಗಾಗಿ ಮಹಾರಾಷ್ಟ್ರದ ಕೆಲವು ಕಡೆಗಳಲ್ಲಿ ಕನ್ನಡ ಬಳಕೆ ಇದೆ. ಕಾದಂಬರಿಕಾರರು ಮೂಲತಃ ಬಿಜಾಪುರ ಜಿಲ್ಲೆಯವರು, ದಲಿತರೂ ಮತ್ತು ಶಿಕ್ಷಿತರೂ ಆಗಿರುವುದರಿಂದ ದಲಿತ ಸಂವೇದನೆ ಇರುವ ಬೆಳಗಾವಿ ಜಿಲ್ಲೆಯ ರಾಯಭಾಗ ಮತ್ತು ಚಿಕ್ಕೋಡಿಯ ಪ್ರಾದೇಶಿಕ ಭಾಷೆಯನ್ನು ಎತ್ತಿ ಹಿಡಿದಿದ್ದಾರೆ. ಕಾದಂಬರಿಯಲ್ಲಿ ಜೋಡುನುಡಿ, ಅನುಕರಣಾವ್ಯಯ, ಗಾದೆ, ಬೈಗುಳಗಳು ಮೂಡಿ ಬಂದಿವೆ. ಭಾಷಾ ಬಳಕೆಯಲ್ಲಿ ನವೀನ ಶೈಲಿಯನ್ನು ಗುರ್ತಿಸಲಾಗಿದೆ. ಅನೇಕ ಕಾದಂಬರಿಕಾರರು ಒಂದು ತೆರನಾಗಿ ವಿಚಾರಗಳನ್ನು ವ್ಯಕ್ತಪಡಿಸಿದರೆ, ಡಾ. ಶಿವರುದ್ರ ಕೆ. ಕಲ್ಲೋಳಿಕರ್ ಅವರು ವಿಶಿಷ್ಟವಾಗಿ ನಿರೂಪಿಸಿದ್ದಾರೆ. ಅವರ ನಿರೂಪಣಾ ಶೈಲಿ ಹಲವು ವಿದ್ವಾಂಸರನ್ನು ಮೋಡಿ ಮಾಡಿರುವುದು ಈ ಅಧ್ಯಯನದಿಂದ ಗೊತ್ತಾಗಿದೆ.

ಒಟ್ಟಾರೆಯಾಗಿ ಹೊಲಗೇರಿಯ ರಾಜಕುಮಾರ ಕಾದಂಬರಿಯನ್ನು ಭಾಷಿಕವಾಗಿ ಅಧ್ಯಯನ ಮಾಡಿರುವುದು ತೃಪ್ತಿಕರವಾಗಿದೆ. ಈ ಕಾದಂಬರಿಯ ವ್ಯಾಪ್ತಿ ವಿಶಾಲವಾಗಿದೆ. ಇನ್ನೂ ಅನೇಕ ಕ್ಷೇತ್ರಗಳಾದ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಲು ಯೋಗ್ಯವಾದ ಕಾದಂಬರಿಯಾಗಿದೆ ಎಂದು ಈ ನನ್ನ ಅಧ್ಯಯನದಿಂದ ಹೇಳಬಯಸುತ್ತೇನೆ.

# ಅನುಬಂಧಗಳು

## ಲೇಖಕರ ಪರಿಚಯ

ಕರ್ನಾಟಕದ ಚರಿತ್ರೆಯಲ್ಲಿ ಬೆಳಗಾವಿ ಜಿಲ್ಲೆ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಕಿತ್ತೂರ ಚೆನ್ನಮ್ಮ ಸಂಗೊಳ್ಳಿ ರಾಯಣ್ಣ, ಮುಂತಾದ ತ್ಯಾಗ ಬಲಿದಾನದ ನೆಲವೆಂದು ಖ್ಯಾತಿಪಡೆದು ಚಾಲುಕ್ಯರು, ಸೇವುಣರು, ಮೊದಲಾದ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಐತಿಹಾಸಿಕ ತಾಣವಾಗಿದೆ.

ಬೆಳಗಾವಿ ಜಿಲ್ಲೆ ೧೦ ತಾಲೂಕುಗಳನ್ನು ಹೊದಿದ ದೊಡ್ಡ ಜಿಲ್ಲೆ ಈ ಜಿಲ್ಲೆಯಲ್ಲಿ ನಾಡಿನ ಶ್ರೇಷ್ಠ ಸಾಹಿತಿಗಳು, ವಿದ್ವಾಂಸರು, ಶಿಕ್ಷಣ ತಜ್ಞರು ಬೆಳೆದು ಬಂದಿದ್ದಾರೆ. ಅವರಲ್ಲಿ ಕೆ.ಜಿ.ಕುಂದಣಗಾರ, ಡಿ,ಸಿ.ಪಾವಟೆ, ಬೆಟಗೇರಿ ಕೃಷ್ಣಶರ್ಮ, ಆನಂದ ಕಂದ, ಎಸ್.ಸಿ. ನಾರಿಮಠ ಕುಲಗೋಡ ತಮ್ಮಣ್ಣ, ಕೌಜಲಗಿಯ ನಿಂಗಮ್ಮ, ಬಸವರಾಜ ಕಟ್ಟಿಮನಿ, ಚಂದ್ರಶೇಖರ ಕಂಬಾರ ಮೊದಲಾದವರು ಹುಟ್ಟಿ ಬೆಳೆದಿದ್ದಾರೆ.

ಆ ಪರಂಪರೆಯ ಮುಂದುವರಿಕೆಯಾಗಿ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ವಲಯದಲ್ಲಿ ಬಿಜಾಪುರ ಜಿಲ್ಲೆಯ ಡಾ. ಶಿವರುದ್ರ ಕೆ. ಕಲ್ಲೋಳಿಕರ ಅವರು ಕಾಣಿಸಿಕೊಳ್ಳುತ್ತಾರೆ. ಪ್ರಸ್ತುತ ಇವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇದರಲ್ಲಿ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರದ ಪ್ರಾಧ್ಯಾಪಕರು ಆಗಿ ಕಾರ್ಯ ನಿರ್ವಹಿಸುತ್ತಾರೆ. ಇವರು ಮೂಲತಃ ವಿಜಾಪುರ ಜಿಲ್ಲೆಯವರಾಗಿದ್ದರೂ ಕಾದಂಬರಿಯಲ್ಲಿ ಬೆಳಗಾವಿ ಪ್ರಾದೇಶಿಕ ಭಾಷೆಯನ್ನು ಬಳಸಿದರು ಇದಕ್ಕೆ ಕಾರಣ ಅವರೇ ಹೇಳುವಂತೆ ಕಥೆ (ಘಟನೆ) ನಡೆದದ್ದು ಬೆಳಗಾವಿ ಜಿಲ್ಲೇ ಆಗಿರುವುದರಿಂದ ಆ ಭಾಷೆ ಅನಿವಾರ್ಯವಾಗಿ ಸ್ವೀಕರಣವಾಯಿತು.

ಕಾದಂಬರಿಕಾರರು ಈ ಕಾದಂಬರಿಯನ್ನು ಆರಂಭಿಕವಾಗಿ (ಮೊದಲನೆಯ) ಬರೆದರೂ ಯಾವುದೇ ಗೊಂದಲಗಳಿಲ್ಲದೇ ಹೊರತಂದಿದ್ದಾರೆ. ಕಲ್ಲೋಳಿಕರ್ ಅವರ ಗೆಳೆಯರ ಬಳಗ ಮತ್ತು ಸಾಹಿತಿಗಳ

ಸಂಬಂಧ ಓದುಗರ ಪ್ರೋತ್ಸಾಹ ಎಲ್ಲವೂ ಸೇರಿ ಸಮರ್ಥವಾದ ರೀತಿಯಲ್ಲಿ ವಿಚಾರ ಮಂಡಿಸುವಲ್ಲಿ ಸಹಾಯಕವಾಯ್ತು. ಕಲ್ಲೋಳಿಕರ್‌ರು ಬರವಣಿಗೆಯ ಕಾರ್ಯದಲ್ಲಿ ತೊಡಗಲು ಈ ಮೊದಲೇ ಹೇಳಿದಂತೆ ಹಲವಾರು ಪಂಡಿತರು, ವಿದ್ವಾಂಸರು, ಸಾಹಿತಿಗಳು ಅಲ್ಲದೇ ಗೆಳೆಯರು ನೀಡಿದ ಪ್ರೋತ್ಸಾಹ ಕಾರಣ. ಕಾದಂಬರಿಯ ಬರವಣಿಗೆ ಇನ್ನೂ ಆರಂಭದಲ್ಲಿರುವಾಗಲೇ ಬನ್ನಿಹಟ್ಟಿಯ ಸಾರಂಗಮಠ ಪ್ರತಿಷ್ಠಾನದವರು ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದು ಒಂದು ಪ್ರೇರಣೆ ಶಕ್ತಿಯಾಗಿ ಪರಿಣಮಿಸಿತು. ವಿಶೇಷವೆಂದರೆ, ಸರಜೂ ಕಾಟ್ಕರ್, ಸುಭಾಷ ಭರಣಿಯವರೂ ಸಹಿತ ಪೂರಕವಾಗಿ ಸಹಾಯಕರಾದರು.

ಕಾದಂಬರಿಯಲ್ಲಿ ಕಾದಂಬರಿಯ ಕಥಾನಾಯಕ 'ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ'ನನ್ನು 'ಮಾದೇವ ಕಾಂಬಳೆ' ಎಂದು ಹೆಸರಿಸಲಾಗಿದೆ. ಕಲ್ಲಪ್ಪ ಜೀವಂತವಿರುವಾಗಲೇ ಆತನ ಕಥೆ ಕಾದಂಬರಿ ರೂಪ ಪಡೆಯಿತು. ಕಲ್ಲಪ್ಪ ಕಾದಂಬರಿಕಾರರನ್ನು ನೋಡಲು ತವಕಪಡುತ್ತಿದ್ದ ಆದರೆ ಲೇಖಕರು ಕೆಲಸದ ನಿಮಿತ್ತ ಹೊರಗಿದ್ದುದರಿಂದ ಸಿಗಲೇ ಇಲ್ಲ. ಕೊನೆಗೆ ಕಲ್ಲಪ್ಪನೇ ತೀರಿಕೊಂಡನು.

ಕಾದಂಬರಿಕಾರರ ಬದುಕಿನಲ್ಲಿ ಬೆನ್ನೆಲುಬಾಗಿ, ಮನೆಯವರು ವಿದ್ವಾಂಸರು, ಸ್ನೇಹಿತರು ಹೀಗೆ ಎಲ್ಲರ ಸಹಾಯವೂ ದೊರಕಿರುದಾಗಿ ತಿಳಿದುಬರುತ್ತದೆ. 'ಹೊಲಗೇರಿಯ ರಾಜಕುಮಾರ' ಕಾದಂಬರಿಯ ಕುರಿತಾಗಿ ವಿಮರ್ಶೆ ವಿಶ್ಲೇಷಣೆ ಪತ್ರಿಕ ಬಳಗದ ಅಭಿಪ್ರಾಯ ಸಾಹಿತಿಗಳ ಅನಿಸಿಕೆ ಪ್ರಕಾಶಕರ ಮುದ್ರಣ ಹೀಗೆ ಎಲ್ಲಾ ಮೂಲದಿಂದಲೂ ಸಕಾರಾತ್ಮಕವಾದ ಸ್ಪಂದನೆ ವ್ಯಕ್ತವಾಗಿದೆ. ಕಾದಂಬರಿಯ ವೈಶಿಷ್ಟ್ಯದಿಂದಾಗಿ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಕಾರನಾಗಿ ನೆಲೆ ನಿಲ್ಲುವಂತಾಗಿದೆ.

**ಕಾದಂಬರಿಯ ಕುರಿತು ಅಭಿಪ್ರಾಯ**

ಕೆಲವು ವರ್ಷಗಳ ಹಿಂದೆಯೇ ಬೆಳಗಾವಿಯ ಜಿಲ್ಲೆಯಲ್ಲಿ ಒಂದು ಅಭೂತಪೂರ್ವವಾದಂತಹ ಘಟನೆ ಆಯಿತು. ಅದು ಸಹಜವಾಗಿ ಸಿನಿಮಾದದಲ್ಲಿ ಮಾತ್ರ ಆಗುವಂತಹದ್ದು ನಿಜಜೀವನದಲ್ಲೂ ಆಗಿರುವಂತದದ್ದು ತುಂಬಾ ಆಶ್ಚರ್ಯಕರ ವಿಷಯವಾಗಿದೆ. ಈ ಸತ್ಯ ಘಟನೆಯನ್ನೇ ಪ್ರೊ. ಶಿವರುದ್ರ ಕೆ. ಕಲ್ಲೋಳಿಕರ್ ಅವರು 'ಕಾದಂಬರಿ'ಯಾಗಿ ಬರೆದಿದ್ದಾರೆ.

ಇಲ್ಲಿ ಬರುವ ಮಾದೇವ, ಪೋಸ್ಟಮಾಸ್ಟರ್ ಕೆಲಸ ಮಾಡುತ್ತಿದ್ದ, ಜಾತಿಯಿಂದ ಹೊಲೆಯರಾದ ಕಲ್ಲಪ್ಪ ಚಂದ್ರಪ್ಪ ಕೋಲ್ಕಾರ್ ಅವರನ್ನು ಪ್ರತಿನಿಧಿಸಿದ್ದಾನೆ. ಅಂಬೇಡ್ಕರ ಬಗ್ಗೆ ಅನನ್ಯ ಭಕ್ತಿಭಾವ ತುಂಬಿಕೊಂಡಿರುವ ಮಾದೇವನು ತಾನು ಹೊಲೆಯ ಅಲ್ಲವೆಂಬ ಸತ್ಯ ಗೊತ್ತಾದಾಗ, ಸವರ್ಣೀಯನಾಗಲು

ಹೆಣಗಾಡಿದನು. ಅಲ್ಲಿಯವರೆಗೆ ಅವನಿಗೆ ಪ್ರೀಯವಾಗಿದ್ದ ವಸ್ತುಗಳು ಅಪ್ರೀಯವೆನ್ನಿಸತೊಡಗುತ್ತವೆ. ಹೆಂಡತಿ ಸುಮತಿಯೂ ಬೇಡವಾಗುತ್ತಾಳೆ.

ಅಪ್ರಜ್ಞಾಪೂರ್ವಕವಾಗಿ ನಡೆದ ಸಂಗತಿ ಹೊಲೆಯನಾಗಿರುವಂತದ್ದು ಈಗ, ಪ್ರಜ್ಞಾಪೂರ್ವಕವಾಗಿ ಮೂಲ ಸಂಸ್ಕೃತಿಗೆಬರಲು ಪ್ರಯತ್ನಿಸುತ್ತಾನೆ. ಆತನು ಎಷ್ಟೇ ಬಯಸಿದರೂ ಮೂಲ ಸಂಸ್ಕೃತಿ (ಕ್ಷತ್ರಿಯ) ಅವನನ್ನು ತನ್ನ ಹತ್ತಿರ ಬರಲು ಬಿಡುವುದಿಲ್ಲ. ಆದರೂ ಈತನಲ್ಲಿರುವ ಆಂತರೀಕ 'ಸವರ್ಣೀಯತೆ' ತನ್ನ ಜನರೆಡೆಗೆ (ಕುರುಂದವಾಡ) ಕರೆದುಕೊಂಡು ಹೋಗುತ್ತದೆ. ಅಲ್ಲಿ ಆತ ನಿಜವನ್ನು ಅನುಭವಿಸಿ ಮತ್ತೆ ವಾಪಸ್ಸು ತನ್ನ ಸಂಸ್ಕೃತಿಗೆ ಅಂದರೆ ಬೆಳೆದು ದೊಡ್ಡವನಾದ 'ಹೊಲೆಯ' ಸಂಸ್ಕೃತಿಗೆ ಮರಳಿ ಬರುತ್ತಾನೆ.

ಕಾದಂಬರಿಯಲ್ಲಿ ಈ ಎಲ್ಲ ಘಟನೆಗಳನ್ನು ಮಾದೇವ ಪಡುವ ಮಾನಸಿಕ ಯಾತನೆಯನ್ನು ಕಾದಂಬರಿಕಾರರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಅಂದರೆ ಮಾದೇವನ ಹಂತ ಹಂತದ ಬೆಳವಣಿಗೆಯನ್ನು ಕ್ರಮಬದ್ಧವಾಗಿಯೇ ಕಾದಂಬರಿಯಲ್ಲಿ ಬಿಡಿಸಿಡಲಾಗಿದೆ. ತನ್ನ ಜನರ ಬಗ್ಗೆ ಮಾದೇವ ಬೆಳೆಸಿಕೊಂಡಿರುವ ಪ್ರೀತಿ, ದ್ವೇಷ, ವೈರತ್ವಗಳನ್ನು ಕಾದಂಬರಿಯಲ್ಲಿ ನೈಜವಾಗಿ ತರಲಾಗಿದೆ.

ಪ್ರೊ. ಕಲ್ಲೋಳಿಕರ್‌ರು ಕತೆಯನ್ನು ಬೆಳೆಸುವ ಪರಿ ವಿಶಿಷ್ಟ ಆಗಿದೆ. ಅದು ಅಧ್ಯಾಯದಿಂದ ಅಧ್ಯಾಯಕ್ಕೆ ಹೊಸ ಹೊಸದಾದ ಆಯಾಮಗಳನ್ನು ಪಡೆಯುತ್ತ ಕುತೂಹಲವನ್ನು ಉಳಿಸಿಕೊಂಡು ಹೋಗುತ್ತದೆ. ಕಾದಂಬರಿಕಾರರು ಇಲ್ಲಿ ಉಪಯೋಗಿಸಿರುವಂತಹ ಭಾಷೆಯೂ ಬೆಳಗಾವಿಯ ಪ್ರಾದೇಶಿಕ ಭಾಷೆ ಅದರಲ್ಲಿ ವಿಶೇಷವಾಗಿ 'ಚಿಕ್ಕೋಡಿ,' 'ರಾಯಭಾಗ'ದ ಕಡೆಯದ್ದು, ಮತ್ತು ಧಾರಾಳವಾಗಿ ಮರಾಠಿಯ ಪ್ರಭಾವವನ್ನು ಗುರ್ತಿಸಬಹುದು ಕಥೆ ನಡೆದ ಸ್ಥಳ ಬೆಳಗಾವಿ ಜಿಲ್ಲೆಯೇ ಆಗಿದ್ದರಿಂದ ಮರಾಠಿ ಭಾಷೆಯನ್ನು ಅನಿವಾರ್ಯವಾಗಿ ಬಳಸಲಾಗಿದೆ.

ಕನ್ನಡದಲ್ಲಿ ದಲಿತರ ಕುರಿತ ಬರೆದ ಅನೇಕ ಕತೆ, ಕಾದಂಬರಿಗಳು ಬಂದಿವೆ. ಆದರೆ ಈ 'ಹೊಲಗೇರಿಯ ರಾಜಕುಮಾರ' ನೀಡುವ ಅನುಭವ ಇವೆಲ್ಲವುಗಳಿಗಿಂತಲೂ ಭಿನ್ನವಾಗಿದೆ. ಒಂದು ಸಂಸ್ಕೃತಿಯಲ್ಲಿದ್ದಾಗ, ಮತ್ತೊಂದು ಸಂಸ್ಕೃತಿಯ ಅವಹೇಳನಗಳನ್ನು ಅನುಭವಿಸುವ ಪರಿ, ಮತ್ತೆ ಅದೇ ಸಂಸ್ಕೃತಿಗೆ ಹೋದಾಗ ಮೊದಲಿದ್ದುದನ್ನು ಅದೇ ರೀತಿಯಲ್ಲಿ ಅವಹೇಳನಕಾರಿಯಾಗಿ ನೋಡುವ ಬಗೆ ವಿಶಿಷ್ಟವಾದುದು ಆಗಿದೆ. ಕಾದಂಬರಿಯ ಮುನ್ನುಡಿ ಕಾದಂಬರಿಯ ವಸ್ತುವಿನ ಹಿನ್ನೆಲೆಯನ್ನು ಒದಗಿಸುತ್ತದೆ. ವಾಸ್ತವ ಬದುಕಿನ ಶ್ರೇಣಿಕೃತ ಜಾತಿ ಮತ್ತು ವೃತ್ತಿಯ ಒಳಸಂಬಂಧಗಳನ್ನು ನೈಜವಾಗಿ ಸ್ಪರ್ಶಿಸಿಕೊಂಡು. ಅದರ ಸಂಕೀರ್ಣಗಳ ಒಡಲೊಳಗೆ ಕಾದಂಬರಿ ಆಕಾರ ಪಡೆದುಕೊಂಡಿದೆ.

ಈ ಕಾದಂಬರಿ ಕನ್ನಡ ದಲಿತ ಸಾಹಿತ್ಯಕ್ಕೆ ಅತ್ಯುತ್ತಮವಾದ ಸೇರ್ಪಡೆಯಾಗಿದೆ. ಜಾತಿ ರಚನೆಯ ಹಲವು ಗೃಹೀತ ಹೇಳಿಕೆಗಳನ್ನು ಪ್ರಶ್ನೆ ಮಾಡುತ್ತ ಜಾತಿಯ ಕ್ರಿಯಾತ್ಮಕ ನೆಲೆಯ ಪರಿಣಾಮದ ಹಲವು ಮಗ್ಗುಲಗಳನ್ನು ಅನಾವರಣ ಮಾಡುವುದು ಈ ಕಾದಂಬರಿಯ ಮುಖ್ಯ ವಿಚಾರಗಳಲ್ಲಿ ಒಂದಾಗಿದೆ.

ಮಾದೇವ ಕಾಂಬಳೆ ತನ್ನ ಕುಲ, ಸಂಸ್ಕೃತಿ ಶ್ರೇಷ್ಠವೆಂದು ಆಸ್ತಿಯೂ ಸಿಗಬಹುದೆಂದೂ ಕುರುಂದವಾಡಕ್ಕೆ (ಮೂಲಸ್ಥಳ) ಹೋದರೆ ಅಲ್ಲಿ ಆಸ್ತಿಯ ಮಾತು ಇರಲಿ ನೋಡಲಿಕ್ಕು ಇರುವುದಿಲ್ಲ ಮತ್ತು ಸಂಸ್ಕೃತಿಯ ಶ್ರೇಷ್ಠತೆಯ ಮಾತಿರಲಿ ಸೋದರತ್ತಿಯಾದವಳು ಯಾವನೋ ವಾಡೆಯ (ಅಹಲ್ಯಾ) ಸಲಹೆಗಾರನೊಡನೆ ಅನೈತಿಕ ಸಂಬಂಧ ಬೆಳೆಸಿ ಇಬ್ಬರು ಮಕ್ಕಳನ್ನು ಪಡೆದ ತಾಯಿಯಾಗಿರುತ್ತಾಳೆ. ಇದು ಹೊಲಗೇರಿಯ ವಿಮಲಿ ಮತ್ತು ತುಳಸಿ ಅವರನ್ನು ನೆನಪಿಸುತ್ತದೆ.

ಕಾದಂಬರಿಯನ್ನು ಓದಿದ ತರುವಾಯ ಇದು ನಡೆದಂತಹ ಸತ್ಯ ಸಂಗತಿಯನ್ನು ಆದರಿಸಿ ಬರೆದಿದ್ದು ಅಥವಾ ಕಾದಂಬರಿಕಾರರ ಪ್ರಥಮ ಪ್ರಯತ್ನವೆಂದಾಗಲೀ, ಅನಿಸುವುದೇ ಇಲ್ಲ. ಇಲ್ಲಿನ 'ಸನ್ನಿವೇಶ ನಿರ್ಮಾಣ,' 'ಒಂದು ಘಟನೆ' ಇನ್ನೊಂದು, ಘಟನೆಯೊಂದಿಗೆ ಪರಸ್ಪರ ಸಂಬಂಧವನ್ನು ಪಡೆಯುವುದು ಮತ್ತು ಪಾತ್ರ ಪೋಷಣೆ ಮುಂತಾದ ಅಂಶಗಳು ಯಶಸ್ವಿಯಾಗಿ ಮೂಡಿಬಂದಿವೆ.

ಬೆಳಗಾವಿಯ ಭಾಷೆ ಕೆಲವು ಕಡೆ ಪಾತ್ರಗಳ ಪೋಷಣೆಯ ಸಹಜತೆಗೆ ಅನುಸಾರವಾಗಿ ಬಂದಿದೆ. ಕಾದಂಬರಿಯಿಂದ ಸಹೃದಯರಿಗೆ ಓದುಗ ಏನು ತಲುಪಬೇಕು ಮತ್ತು ಹೇಗೆ ಮುಟ್ಟಬೇಕು ಎರಡೂ ಉದ್ದೇಶಗಳೂ ಇಲ್ಲಿ ಸಂಪೂರ್ಣವಾಗಿ ಸಫಲವಾಗಿವೆ.

ಒಂದೊಂದು ಪಾತ್ರದ ಮೂಲಕ ಮತ್ತು ಒಂದೊಂದು ಘಟನೆ ಸಂಗತಿಯ ಮೂಲಕ ವ್ಯಕ್ತಿಗೆ ಎದುರಾಗುವ ಸಂದಿಗ್ಧ ಸಮಸ್ಯೆಗಳ ಸ್ವರೂಪ ಬದುಕಿನಿಂದ ಪಲಾಯನಗೊಳ್ಳದೇ ಅದನ್ನು ಎದುರಿಸಬೇಕೆಂಬ ಛಲವನ್ನು ಓದುವ ಮನುಷ್ಯರಲ್ಲಿ ಉಂಟುಮಾಡುವ ಅಪೇಕ್ಷೆ ಈ ಕಾದಂಬರಿಗಿದೆ ಎಂದು ಹೇಳಿದರೆ ತಪ್ಪಿಲ್ಲ. ಇದು ಸ್ವಾಭಿಮಾನದ ಪಾಠ ಕಲಿಸುವಂತಹ ಕಾದಂಬರಿಯಾಗಿದೆ. ಕನ್ನಡ ಸಾಹಿತ್ಯದಲ್ಲಿಯೇ 'ಹೊಲಗೇರಿಯ ರಾಜಕುಮಾರ' ಒಂದು ಹೊಸ ಬಗೆಯ ಕಾದಂಬರಿಯಾಗಿದೆ.

ಮೂಢನಂಬಿಕೆ, ಪುರಷ ಪ್ರದಾನ ವ್ಯವಸ್ಥೆ ಮತ್ತು ಜಾತಿಯ ವಿಷ ವರ್ತುಲ ಇನ್ನಿತರ ಅನೇಕ ಅಮಾನವೀಯ ಬದುಕಿನ ಎಳೆಗಳನ್ನು ಬದಿಗೆ ಸರಿಸಿ ಗೌರವದ ಬದುಕಿನತ್ತ ಕಾದಂಬರಿ ಮುಖಮಾಡುತ್ತದೆ. ದಲಿತನೊಬ್ಬ ಹಠಾತ್ತಾಗಿ ಸವರ್ಣೀಯವಾಗಲು ಪ್ರಯತ್ನಿಸಿದಾಗ ಸಹಜವಾಗಿ ಅವನು ತನ್ನ ಇರುವಿಕೆಯನ್ನು ಗುರ್ತಿಸಿಕೊಳ್ಳಲು ಪ್ರಯತ್ನಿಸುವ ಪ್ರಕ್ರಿಯೇ ಈ ಕಾದಂಬರಿಯ ಮುಖ್ಯ ವಸ್ತು.

ಇದು ವಿಭಿನ್ನ ನಿರೂಪಣಾ ತಂತ್ರವನ್ನು ಹೊಂದಿರುವುದರಿಂದ ಪ್ರಶಸ್ತಿಗೆ ಪಾತ್ರವಾಗಿರುವ ಕಾದಂಬರಿಯಾಗಿದೆ. ಈ ಕಾದಂಬರಿಯ ಜೀವನ ಯಥಾರ್ಥವಾಗಿದೆ. ಬೆಳಗಾವಿ ಕಡೆಯ ಆಡುಮಾತಿನ ಸೊಗಡು, ಆತ್ಮವಿಮರ್ಶೆಯ ಪ್ರಮಾಣಿಕತೆ, ದಲಿತ ಚಳುವಳಿಯ ತಾತ್ವಿಕ ನೆಲೆಯ ಮೇಲಿನ ಪ್ರತಿಪಾದನೆ ಇವೆಲ್ಲವೂ ಈ ಕಾದಂಬರಿಯ ವಿಶೇಷತೆಗಳು ಆಗಿವೆ. ಬರವಣಿಗೆಯಲ್ಲಿ ಹಿಡಿದಿಟ್ಟಿರುವ ಒಂದು ವೈಚಾರಿಕ ಆಯಾಮದಿಂದ ಎಲ್ಲರ ಗಮನ ಸೆಳೆಯುವಂತಿದೆ. ಸರಳವಾದ ಶೈಲಿಯಲ್ಲಿ ಆಕರ್ಷಕವಾಗಿ ಕುತೂಹಲಕಾರಿಯಾದಂತಹ ಘಟನೆ (ಸತ್ಯಸಂಗತಿ) ಯನ್ನು ಆದರಿಸಿದಂತಹ ಕೃತಿಯಾಗಿದೆ.

ಈ ಕಾದಂಬರಿಯು ಈಚೆಗೆ (ಇತ್ತೀಚೆಗೆ) ಕನ್ನಡದಲ್ಲಿ ಭಾಷೆ ಪ್ರಕಟವಾಗಿರುವ ಉತ್ತಮ ಕೃತಿಗಳಲ್ಲಿ (ಕಾದಂಬರಿ) ಒಂದೆಂದು ಅಭಿಪ್ರಾಯ ಪಡಲಾಗಿದೆ. ಕಾದಂಬರಿಯಲ್ಲಿ ನಾಯಕ ಪಾತ್ರ ಪೋಷಿಸಿದ ಮಾದೇವ ಕಾಂಬಳೆ ಅವನ ಬಾಳುವೆ, ಆಲೋಚನೆ, ಪರಿವರ್ತನೆ, ಇದೆಲ್ಲವೂ ಕೃತಕ ಎಂದೆನಿಸದೆ ಸಹಜವಾಗಿಯೇ ಮೂಡಿದೆ.

ಕಾದಂಬರಿಯ ನಾಯಕ ಮಾದೇವ ಕಾಂಬಳೆ ಒಂದು ಭ್ರಮೆಯಿಂದ ಹೊರಗೆ ಬಂದು ನಮ್ಮ ನೆಲದ ಮಣ್ಣಿನ ಮಕ್ಕಳ ಹೋರಾಟದಲ್ಲಿ ತುಂಬಾ ಆಸಕ್ತಿಯಿಂದ ಶ್ರದ್ಧೆಯಿಂದ ಸಕ್ರಿಯವಾಗಿ ಬೆರೆತು ಹೋರಾಟದಲ್ಲಿ ಪಾಲ್ಗೊಂಡ ಪ್ರಸಂಗ ಅದ್ಭುತವಾಗಿದೆ. ಸತ್ಯ ಮತ್ತು ವಾಸ್ತವ ಪರಿಸ್ಥಿತಿಗಳೂ ಸಹಿತ ಕಲ್ಪನೆಗಳಿಗಿಂತ ಹೆಚ್ಚು ರಮ್ಯವಾಗಿರಬಲ್ಲವು ಎಂದು ತಿಳಿಸುವ ಕಾದಂಬರಿ 'ಹೊಲಗೇರಿಯ ರಾಜಕುಮಾರ' ಕಾದಂಬರಿ ಆಗಿದೆ.

## ಪರಾಮರ್ಶನ ಗ್ರಂಥಗಳು


೧. ಅರವಿಂದ ಮಾಲಗತ್ತಿ ೨೦೦೯, ಗೌರ್ನ್‌ಮೆಂಟ ಬ್ರಾಹ್ಮಣ ಪ್ರ- ಚೇತನ ಬುಕ್ ಹೌಸ್ ಮೈಸೂರ.

೨. ಅರವಿಂದ ಮಾಲಗತ್ತಿ, ಕಾದಂಬರಿಗಳ ವಿಮರ್ಶೆ ಪ್ರ- ಮೈಸೂರು ವಿ.ವಿ. ಮೈಸೂರು

೩. ಡಾ. ಅಶೋಕ ಕುಮಾರ ೨೦೦೫, ಭಾಷೆ ಮತ್ತು ಶಿಕ್ಷಣ ಪ್ರ. ನಿಧಿ ಪ್ರಕಾಶನ, ಹೊಸಪೇಟೆ

೪. ಅಶೋಕ ಕುಮಾರ ೨೦೦೯, ನಮ್ಮ ಕನ್ನಡ ಸಂಚಿಕೆ ೬೫, ಪ್ರ- ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೫. ಅಂಗಡಿ ಎಸ್.ಎಸ್. ೨೦೦೩, ಕನ್ನಡ ನಿಘಂಟು ರಚನೆ, ಪ್ರ- ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೬. ಕಲಬುರ್ಗಿ ಎಂ.ಎಂ. ೨೦೦೯, ಕನ್ನಡ ಸಂಶೋಧನಾ ಶಾಸ್ತ್ರ, ಪ್ರ- ಸ್ವಪ್ನ ಬುಕ್ ಹೌಸ್ ಬೆಂಗಳೂರು

೭. ಕೀರ್ತಿನಾಥ ಕುರ್ತಕೋಟಿ ೨೦೦೭, ಯುಗಧರ್ಮ ಸಾಹಿತ್ಯ ದರ್ಶನ ಪ್ರ- ಮನೋಹರ ಗ್ರಂಥಮಾಲ ಧಾರವಾಡ

೮. ಕೃಷ್ಣಯ್ಯ ಎಂ.ಎಚ್. ೧೯೯೯, ಕನ್ನಡ ಭಾಷೆಯ ಚರಿತ್ರೆ ಪ್ರ- ಅಂಕಿತ ಪುಸ್ತಕ ಬಸವನ ಗುಡಿ

೯ ಕೀರ್ತಿನಾಥ ಕುರ್ತಕೋಟಿ ೨೦೦೭ ಭಾಷೆ ಮತ್ತು ಸಂಸ್ಕೃತಿ ಪ್ರ- ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್ ಧಾರವಾಡ

೧೦. ಕುಶಾಲಪ್ಪಗೌಡ ಕೆ. ೨೦೦೮, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ ಪ್ರ- ಕಾರ್ತಿಕ ಎಂಟರ್ ಪ್ರೈಸಸ್ ಬಿ.ವಿ.ಸಿ. ಬಡಾವಣೆ ವಿಜಯನಗರ ಬೆಂಗಳೂರು.

೧೧. ತಾರಾನಾಥ ಎಸ್.ಎಸ್. ಮತ್ತು ಸುಂದರಂ ಆರ್.ವಿ.ಎಸ್. ೨೦೦೯, ಸಂಶೋಧನ ಪಥ ಪ್ರ- ಚೇತನ ಬುಕ್ ಹೌಸ್ ಮೈಸೂರು.

೧೨. ತಾಳ್ತಜೆ. ವಸಂತಕುಮಾರ ೧೯೯೮, ಸಂಶೋಧನಾರಂಗ ಪ್ರ- ಕನ್ನಡ ವಿಭಾಗ ಮುಂಬೈ ವಿಶ್ವವಿದ್ಯಾಲಯ ಮುಂಬೈ.

೧೩. ತೀ.ನಂ.ಶ್ರೀ, ೧೯೭೨ ಕನ್ನಡ ಮಧ್ಯಮ ವ್ಯಾಕರಣ ಪ್ರ- ಗೀತಾಬುಕ್ ಹೌಸ್ ಗೀತಾ ಬುಕ್ ಹೌಸ್, ಮೈಸೂರು

೧೪. ನಾರಾಯಣ ಕೆ.ವಿ. ೧೯೯೯, ಕನ್ನಡ ಭಾಷಾಭಿವೃದ್ಧಿ ಪ್ರ- ಕ.ವಿ.ವಿ. ಹಂಪಿ, ವಿದ್ಯಾರಣ್ಯ

೧೫. ನಾರಾಯಣ ಕೆ.ವಿ. ೨೦೦೭, ಕನ್ನಡ ಜಗತ್ತು ಅರ್ಧಶತಮಾನ ಪ್ರ- ಕ.ವಿ.ವಿ. ಹಂಪಿ

೧೬. ನರಸಿಂಹಮೂರ್ತಿ ಎ.ವಿ. ೧೯೯೯, ಕನ್ನಡ ಲಿಪಿಯ ಉಗಮ ಮತ್ತು ವಿಕಾಸ ಪ್ರ- ವಿವೇಕಾನಂದ, ಬೆಂಗಳೂರು

೧೭. ಪಾಂಡುರಂಗ ಬಾಬು ಡಿ. ೨೦೦೫, ನಮ್ಮ ಕನ್ನಡ ಸಂಚಿಕೆ ೬೦, ಪ್ರ- ಕ.ವಿ.ವಿ. ಹಂಪಿ

೧೮. ಪಾಂಡುರಂಗಬಾಬು ಡಿ. ೨೦೦೬, ನಮ್ಮ ಕನ್ನಡ ಸಂಚಿಕೆ ೬೨, ೬೩, ಪ್ರ- ಕ.ವಿ.ವಿ.ಹಂಪಿ.

೧೯. ಪೂಜಾರ ವ್ಹಿ.ಜಿ. ೨೦೦೮, ಕನ್ನಡ ವ್ಯಾಕರಣ ಮತ್ತು ಭಾಷೆ ಪ್ರ- ಚೇತನ ಪ್ರಕಾಶನ ಗುಲಬರ್ಗಾ

೨೦. ಪ್ರಭುಶಂಕರ ಬಾ.ವೆ. ಶ್ರೀಧರ ೨೦೦೬, ಕನ್ನಡ ಇಂಗ್ಲಿಷ್ ನಿಘಂಟು ಪ್ರ- ಅಭಿನವ ವಿದ್ಯಾನಗರ ಬೆಂಗಳೂರು

೨೧. ಮರುಳಯ್ಯ ಸಾ.ಶಿ. ೨೦೦೭, ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ ಪ್ರ- ಸ್ವಪ್ನ ಬುಕ್ ಹೌಸ್

೨೨. ಮಹಾದೇವಯ್ಯ ಪಿ. ೨೦೦೬, ದಲಿತರು ಭಾಷೆ ಮತ್ತು ಸಮಾಜ ಪ್ರ- ಕ.ವಿ.ವಿ. ಹಂಪಿ

೨೩. ಮಹಾದೇವಯ್ಯ ಪಿ. ೨೦೦೦ ಸಾಮಾಜಿಕ ಉಪಭಾಷೆ ಪ್ರ- ಕ.ವಿ.ವಿ. ಹಂಪಿ

೨೪. ರಹಮತ್ ತರಿಕೇರೆ ೧೯೯೯, ಬಹುಭಾಷಿಕ ಸಂಸ್ಕೃತಿ ಪ್ರ- ಕ.ವಿ.ವಿ. ಹಂಪಿ

೨೫. ಲಕ್ಷ್ಮಣ ಗಾಯಕವಾಡ ೧೯೯೭, ಉಚಲ್ಯಾ ಪ್ರ- ನವಕರ್ನಾಟಕ ಪ್ರಕಾಶನ

೨೬. ವೆಂಕಟೇಶ ಜಿ. ಮಲ್ಲೇಪುರಂ ೨೦೦೯, ಕನ್ನಡ ಭಾಷಾದ್ಯಯನ ಪ್ರ- ಪ್ರತಿಭಾ ಪ್ರಕಾಶನ ಗೋಕಲ ಮೈಸೂರು

೨೭. ವೆಂಕಟಾಚಲಶಾಸ್ತ್ರಿ ಟಿ.ವಿ. ೧೯೯೦, ಹೊಸಗನ್ನಡ ವ್ಯಾಕರಣ ಪ್ರ- ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೨೮. ವೆಂಕಟಸುಬ್ಬಯ್ಯ ಜಿ. ೨೦೦೨, ಕನ್ನಡ ನಿಘಂಟು ಪರಿವಾರ ಪ್ರ- ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

೨೯. ವಿಲ್ಯಂ ಮಾಡ್ತ ೨೦೦೩, ಕನ್ನಡ ಭಾಷೆಯ ರೂಪರೇಷೆಗಳು ಪ್ರ- ಕ.ವಿ.ವಿ. ಧಾರವಾಡ

೩೦. ಶರಣಕುಮಾರ ಲಿಂಬಾಳೆ ೧೯೯೯, ಅಕ್ರಮ ಸಂತಾನ ಪ್ರ- ನವಕರ್ನಾಟಕ ಪ್ರಕಾಶನ

೩೧. ಶಿರವರಾಮ ಕಾರಂತ ೨೦೧೦, ಚೋಮನದುಡಿ ಪ್ರ- ಸ್ವಪ್ನ ಬುಕ್ ಹೌಸ್ ಬೆಂಗಳೂರು

೩೨. ಶೇಷಗಿರಿರಾವ್ ಎಲ್.ಎಸ್. ೨೦೦೮, ಸುಭಾಷ್ ನಿಘಂಟು (ಕ-ಕ-ಇ-ಇ-ಕ) ಪ್ರ- ಸುಭಾಸ್ ಸ್ಟೋರ್ಸ್ ಬುಕ್ಸ್ ಕೃಷ್ಣ ಬಿಲ್ಡಿಂಗ್ ಬೆಂಗಳೂರು

೩೩. ಶ್ರೀಮತಿ ಎಚ್.ಎಸ್. ಮತ್ತು ಇತರರು ೨೦೦೭, ಹೆಣ್ಣು ಮತ್ತು ಭಾಷೆ ಪ್ರ- ಮಹಿಳಾ ಅಧ್ಯಯನ ಕೇಂದ್ರ, ಕ.ವಿ.ವಿ. ಹಂಪಿ

೩೪. ಶಂಕರಭಟ ಡಿ.ಎನ್. ೧೯೯೫ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ ಪ್ರ- ಕ.ವಿ.ವಿ. ಹಂಪಿ

೩೫. ಷೆಲ್ಡನ್ ಪೊಲಾಕ್ ೨೦೦೦, ದೇಶ ಭಾಷಾ ನಿರ್ಮಾಣ ಪ್ರ- ಕ.ವಿ.ವಿ. ಹಂಪಿ.

೩೬. ಸಂಗಮೇಶ ಸವದತ್ತಿಮಠ ೧೯೯೮, ಕನ್ನಡ ಭಾಷಾ ಪ್ರಭೇದಗಳು ಪ್ರ- ಕ.ವಿ.ವಿ. ಹಂಪಿ

೩೭. ಸಂಗಮೇಶ ಸವದತ್ತಿಮಠ ೨೦೦೮, ಕನ್ನಡ ಭಾಷಾವ್ಯಾಸಂಗ ಪ್ರ. ರೂಪರಶ್ಮಿ ಪ್ರಕಾಶನ ಧಾರವಾಡ

೩೮. ಸಾಂಬಮೂರ್ತಿ ೨೦೦೧, ದಿನ ದಿನ ೨, ಪ್ರ- ಕ.ವಿ.ವಿ. ಹಂಪಿ ವಿದ್ಯಾರಣ್ಯ

೩೯. ಸಾಂಬಮೂರ್ತಿ ೨೦೦೪, ಭಾಷೆ ಮತ್ತು ಅಶಾಬ್ದಿಕ ಸಂವಹನ ಪ್ರ- ಸಿ.ವಿ.ಜೆ. ಪಬ್ಲಿಕೇಶನ್ಸ್ ಬೆಂಗಳೂರು

೪೦. ಕನ್ನಡ ಭಾಷಾಧ್ಯಯನ ವಿಭಾಗ ೨೦೦೯, ಭಾಷೆ ವಿಶ್ವಕೋಶ ೧, ಪ್ರ- ಕ.ವಿ.ವಿ. ಹಂಪಿ, ವಿದ್ಯಾರಣ್ಯ

